
ಓದುಗರಿಗೆ
ಉಗಾದಿಯ
ಶುಭಾಶಯಗಳು

# ವನಿತಾ ವಾಣಿ

ವನಿತಾ (ಮಾರ್ಚ್ 92) ಮಾಸಪತ್ರಿಕೆಯಲ್ಲಿ ಪ್ರಕಟವಾಗಿರುವ ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರದ ದೇವಾಲಯಗಳ ಬಗ್ಗೆ ಸಚಿತ್ರ ಬರಹವನ್ನು ಓದಿದ ಮೇಲೆ ಈ ಕ್ಷೇತ್ರವನ್ನು ಸಂದರ್ಶಿಸಲೇಬೇಕೆಂಬ ಬಯಕೆಯುಂಟಾಗಿದೆ.

**—ಕೃಷ್ಣವೇಣಿ ಎಸ್. ರಾವ್**
**ಮೈಸೂರು**

## ವನಿತಾ
### ತೀರ್ಪುಗಾರರ ಅನಿಸಿಕೆ

ಸಾಹಿತ್ಯ ರಚನೆಯಲ್ಲಿ ಮಹಿಳೆಯರಿಗೆ ಪ್ರೋತ್ಸಾಹ ನೀಡಲೋಸುಗ ವಿಶೇಷ ಸಂದರ್ಭಗಳಲ್ಲಿ ವಿಶೇಷಾಂಕಗಳನ್ನು ಹೊರಡಿಸಿ ಲೇಖಕಿಯರಿಗೆ 'ವನಿತಾ' ಪ್ರೋತ್ಸಾಹ ನೀಡುತ್ತ ಬಂದಿದೆ. ಯುಗಾದಿಗಾಗಿ 'ಮಿನಿಕತೆಗಳ ಸ್ಪರ್ಧೆ' ಅಂತಹ ಒಂದು ಪ್ರಯತ್ನ. 200 ಕ್ಕೂ ಮೇಲೆ ಕತೆಗಳನ್ನು ಕಳಿಸಿ ಮಹಿಳೆಯರು ಉತ್ಸಾಹ ಪ್ರದರ್ಶಿಸಿದರೂ ಗುಣಾತ್ಮಕವಾಗಿ ಅತ್ಯಂತ ನಿರಾಶಾದಾಯಕವಾಗಿದೆ. ಆದರೂ ಅವುಗಳಲ್ಲೇ ಸುಮಾರಾಗಿ ಇರುವ ಕತೆಗಳನ್ನು ಇಲ್ಲಿ ಪ್ರಕಟಿಸಲಾಗಿದೆ. —ಸಂ.

ಗಂಗಾ ಪಾದೇಕಲ್ ಅವರ ಕಾದಂಬರಿ "ಇನ್ನೊಂದು ಅಧ್ಯಾಯ" ಚೆನ್ನಾಗಿತ್ತು. ವಸುಧಳಿಗೆ ಕೊನೆಗಾದರೂ ಸುಖ ಸಿಕ್ಕಿತಲ್ಲಾ ಸಂತೋಷವಾಯಿತು. ಮುಕ್ತಾಯ ಚೆನ್ನಾಗಿತ್ತು.

**—ರಾಜೇಶ್ವರಿ ಸುಬ್ಬರಾಂ, ಮೈಸೂರು-23**

'ಮಾರ್ಚ್–92'ರ 'ವನಿತಾ'ದಲ್ಲಿ 'ಲಾವಣ್ಯ ಕಮಲೇಶ್' ರವರ ಕುರಿತು ಓದಿದಾಗ 'ವನಿತಾ' ದೊಡನೆ ನಾವೂ ಕೂಡ "ಭವ್ಯ ಭವಿಷ್ಯ" ಹಾರೈಸಲೇ ಬೇಕೆನಿಸಿದೆ.

**—ಅರುಣಾ ಗೋಪಾಲಕೃಷ್ಣ ಭಟ್**
**ಬದಿಕೋಡಿ (ದ.ಕ.)**

ಕಿರಿಯ ವಯಸ್ಸಿನ ಪ್ರತಿಭಾನ್ವಿತ ಗಾಯಕಿ ಲಾವಣ್ಯ ಕಮಲೇಶ್‌ರ ಮುಖಪುಟ (ವನಿತಾ ಮಾರ್ಚ್ 92) ಆಕರ್ಷಕವಾಗಿತ್ತು.

ಈ ತಿಂಗಳ 'ವನಿತಾ'ದ ಎಲ್ಲ ಕಥೆಗಳೂ ಚೆನ್ನಾಗಿದ್ದವು. 'ಕಥೆಗೊಂದು ಚಿತ್ರ' ಶೀರ್ಷಿಕೆಯಲ್ಲಿನ ಒಂದೆರೆಡು ಕಥೆಗಳು ಚೆನ್ನಾಗಿದ್ದವು.

ಬಹಳ ದಿನಗಳ ಮೇಲೆ ಮೂಡಿ ಬಂದ "ಹೇಮಾಮೂರ್ತಿ ಮತ್ತು ಕೇಶವಮೂರ್ತಿಯವರ" 'ಭಲೇ ಜೋಡಿ'ಯಲ್ಲಿ ಅವರ ಪ್ರತಿಭೆಗಳ ಪರಿಚಯ ಲೇಖನ ಚೆನ್ನಾಗಿದೆ.

**—ವಿಭಾ, ತುಮಕೂರು**

ಮಾರ್ಚ್ 1992ರ 'ವನಿತಾ'ದಲ್ಲಿ ಮೂಡಿ ಬಂದಿರುವ ಶ್ರೀಮತಿ ಅವಂತಿಕಾ ಎಂ. ಪಾಟೀಲ ವಿರಚಿತ ಕಥೆ 'ಕಾಲ್ಗುಣ' ದಲ್ಲಿ ಸೊಸೆಯ ಕಾಲ್ಗುಣದ ಬಗ್ಗೆ ಕಠೋರವಾಗಿ ನುಡಿಯುತ್ತಿದ್ದ ಅತ್ತೆ ಕಮಲಮ್ಮನಿಗೆ, ಅಂತ್ಯದಲ್ಲಿ ಆಕೆಯ ಗುಣ, ಕಾಲ್ಗುಣದ ಬಗ್ಗೆ ಅರಿವಾಗುವ ರೀತಿ ಸೊಗಸಾಗಿ ಚಿತ್ರಿತವಾಗಿದೆ.

ಸುಭದ್ರಾ ಡಿ. ಬಡಿಗೇರ ವಿರಚಿತ ಕಥೆ 'ಕಣ್ಣು ತೆರೆಯಿತು' ಕಥೆಯಲ್ಲಿ ಸುಲಭಾಳ ಕಣ್ಣು ತೆರೆಸಲು ಆಕೆಯ ತಾಯಿ ಹಾಗೂ ಅತ್ತಿಗೆ ಆಡಿದ ನಾಟಕ ಅಂತ್ಯದಲ್ಲಿ ಯಶಸ್ವಿಯಾದುದು ಸೊಗಸಾಗಿದೆ.

**—ಕು|| ಹೆಚ್. ಗೀತಾಮೂರ್ತಿ**
**ತುಮಕೂರು**

ಮಾರ್ಚ್ 1992ರ ವನಿತಾ ಸಂಚಿಕೆಯಲ್ಲಿ 'ಚಲಚಿತ್ರೋತ್ಸವದ ತಾರೆ ದೀಪಕ್ ಸಂಧು' ರವರ ಬಗೆಗಿನ ಲೇಖನ ಚೆನ್ನಾಗಿ ಮೂಡಿಬಂದಿದೆ. ವಿವಾದದ ಸುಳಿಯಲ್ಲಿರುವ ಅಶ್ವಿನಿಯ ಬಗ್ಗೆ ಓದಿ ಬೇಸರವಾಯಿತು. ಇಂತಹ ವಿವಾದಗಳಿಂದಲೇ ನಮ್ಮ ದೇಶದಲ್ಲಿ ಕ್ರೀಡಾರಂಗದಲ್ಲಿ ಮಾತ್ರವಲ್ಲ, ಬೇರೆ ರಂಗದಲ್ಲೂ ಉತ್ಸಾಹ ಯುವ ಜನತೆ ಹಿಂಜರಿಯುತ್ತಿದೆ ಎಂದು ಕಾಣುತ್ತದೆ. ಯಾವ ವಿವಾದವಿದ್ದರೂ ಅಶ್ವಿನಿಯವರು ಒಲಿಂಪಿಕ್ಸ್‌ನಲ್ಲಿ ಭಾಗವಹಿಸಿ, ನಮ್ಮ ರಾಜ್ಯಕ್ಕೆ ಮಾತ್ರವಲ್ಲ, ದೇಶಕ್ಕೂ ಹೆಸರು ತರಲಿ ಎಂಬುದು ನನ್ನ ಹಾರೈಕೆ.

ಗಂಗಾ ಪಾದೇಕಲ್ ರವರ "ಇನ್ನೊಂದು ಅಧ್ಯಾಯ" ಧಾರಾವಾಹಿ ಒಳ್ಳೆಯ ರೀತಿಯಲ್ಲಿ ಮುಕ್ತಾಯವಾಯಿತು.

**—ಶೋಭಾದೇವಿ ಯು., ಕೊಳಂಬೆ**

ಮಾರ್ಚ್ 92ರ ವನಿತಾ ಪತ್ರಿಕೆ ಸಕಾಲದಲ್ಲಿ ಕೈ ಸೇರಿತು. ಬಹುಮುಖ ಪ್ರತಿಭೆಯ ಲಾವಣ್ಯ ಆಕರ್ಷಕ ಮುಖಪುಟವನ್ನು ನೋಡಿ ಸಂತೋಷವಾಯ್ತು. ಶಿವರಾತ್ರಿಯ ಶುಭ ಸಂದರ್ಭಕ್ಕೆ ತಕ್ಕಂತೆ ಕುಂದಾಪುರದ ಶ್ರೀ ಕುಂದೇಶ್ವರ ದೇವಸ್ಥಾನದ ಬಗ್ಗೆ ಸಚಿತ್ರ ಲೇಖನ ಪ್ರಕಟಿಸಿರುವಿರಿ. ವನಿತಾದಲ್ಲಿ ಈವರೆಗೆ ಪ್ರಕಟವಾದ ಎಲ್ಲ ದೇವಾಲಯಗಳ ಬಗೆಗಿನ ಲೇಖನಗಳನ್ನು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಸಂಗ್ರಹಿಸಿ ಪ್ರಕಟಿಸಿದರೆ ತುಂಬ ಚೆನ್ನಾಗಿತ್ತು.

**—ಕೆ. ಎನ್. ಅನ್ನಪೂರ್ಣಮ್ಮ, ಶಿಡ್ಲಘಟ್ಟ**


## ವನಿತಾ
**ಮಹಿಳೆಯರ ಮಾಸಪತ್ರಿಕೆ**

**ಸಂಪುಟ : 15 ಸಂಚಿಕೆ : 7**

**ಏಪ್ರಿಲ್ 1992**

**ಬಿಡಿ ಪ್ರತಿ : 6–00 ರೂಪಾಯಿ**

**ವಾರ್ಷಿಕ ಚಂದಾ : 72/– ರೂ.**

**ವಿಳಾಸ:**
**ಡಾಲ್ಟನ್ ಪಬ್ಲಿಕೇಷನ್ಸ್,**
**ಚಂದಮಾಮಾ ಬಿಲ್ಡಿಂಗ್ಸ್,**
**ವಡಪಳನಿ – 26**

ಬೆಂಗಳೂರು ಕಚೇರಿ ವಿಳಾಸ:
**"ವನಿತಾ"**
**ಕಮಾಂಡರ್ಸ್ ಪ್ಲೇಸ್ (ಮಹಡಿ)**
**ರಾಜಾರಾಮ್ ಮೋಹನ್‌ರಾಯ್ ರಸ್ತೆ**
**ಬೆಂಗಳೂರು–560 025**
**ಫೋನ್ : 220912**


## ವನಿತಾ ಪದಸಂಪದ 42
### ಫಲಿತಾಂಶಗಳು

ಈ ಬಾರಿಯ ಸ್ಪರ್ಧೆಯಲ್ಲಿ ನೂರಾರು ಸ್ಪರ್ಧಿಗಳು ಸರಿಯುತ್ತರ ಬರೆದಿದ್ದು ಹತ್ತು ಸ್ಪರ್ಧಿಗಳನ್ನು (ಡ್ರಾ ಮೂಲಕ) ಆಯ್ಕೆ ಮಾಡಲಾಗಿದೆ. ಹೀಗೆ ಆಯ್ಕೆಯಾದ ಹತ್ತು ವಿಜೇತರ ಹೆಸರುಗಳನ್ನು ಈ ಕೆಳಗೆ ನೀಡಲಾಗಿದೆ. ಗೆದ್ದವರಿಗೆ ಬಹುಮಾನದ ಹಣವನ್ನು ಸಮವಾಗಿ ಹಂಚಲಾಗುತ್ತದೆ.

1. ಅಮರಾವತಿ ಶೇಷನ್, ಮೈಸೂರು
2. ಶ್ರೀಮತಿ ಲೀಲಾಮೂರ್ತಿ, ಪುತ್ತೂರು
3. ಜಯಲಕ್ಷ್ಮಿ ಟಿ. ಆರ್. ತಾಗರ್ತಿ
4. ಮಂಜುಳ ಮಹದೇವಸ್ವಾಮಿ, ಭದ್ರಾವತಿ
5. ಶ್ರೀಮತಿ ಹೆಚ್. ಎಸ್. ಸ್ವರ್ಣಲತ, ಗೊರೂರು
6. ಗೀತಾ ನಾರಾಯಣ್, ಮೈಸೂರು
7. ಉಮಾ ವಿವೇಕಾನಂದ, ಭದ್ರಾವತಿ
8. ಶ್ರೀಮತಿ ತ್ರಿಶಲಾ ಪ್ರಸಾದ್, ಶಕ್ತಿನಗರ
9. ಅನಿತಾ ಆರ್. ಕಾಮತ, ಚಿಕಾಲಿಂ
10. ಆರ್. ವಿ. ಕರುಣಾಮಯಿ, ಮೈಸೂರು

| | | | | | | | | | | |
|---|---|---|---|---|---|---|---|---|---|---|
| ಆ | ದಿ | ಶ | ಕ್ತಿ | | ಕೋ | | ವ | ರ | ಫಲ | ಕ |
| ಸ್ತೋ | | ರ | | ನ | ಮ | ಕು | | ಜ | | ಟ |
| ತ | | ಧಿ | ಕ್ಕಾ | ರ | | ಮಾ | ರು | ತೆ | | ಕ |
| ನ | ದಿ | | | ಕ | ಮ | ಠ | | | ದಾ | ಳಿ |
| | ವಾ | | | | ರ | | | | ಜ್ಞಾ | |
| ಬ | ನ | ವಾ | ಸಿ | | ಇ | | ಕೆ | ಲು | ಸ | ಚ್ಚಿ |
| | ಸಿ | | | | ರಾ | | | | ಳ | |
| ನ | ಠ | | | ಪ | ಲ | ಘು | | | ನೆ | ವಿ |
| ಕ್ಷ | | ಹೋ | ಮಾ | ಕ | | ಮಾ | ಕ್ಸ | ಶ | | ಗ |
| ತ್ರಿ | | ರಂ | | ನ | ಮ | ನ | | ಜ | | ತ್ರ |
| ಕ | ಲಾ | ಬ | ತ್ತು | | ಜ್ಞ | | ಅ | ಕ | ಸ್ವ | ಕ |

ಮಾರ್ಚ್ ತಿಂಗಳ 'ಭಲೇ ಜೋಡಿ' ಲೇಖನ ಪೂರೈಸಿದವರ ಹೆಸರು ತಪ್ಪಾಗಿ ಮುದ್ರಿತವಾಗಿದೆ. ಲೇಖಕಿಯ ಹೆಸರನ್ನು **ಟಿ. ಸಿ. ಪೂರ್ಣಿಮಾ** ಎಂದು ಓದಿಕೊಳ್ಳಬೇಕಾಗಿ ಓದುಗರಲ್ಲಿ ಕೇಳಿಕೊಳ್ಳುತ್ತಿದ್ದೇವೆ. —ಸಂ.]

# ಪ್ರಪಂಚ ಪ್ರದಕ್ಷಿಣೆ

## ಬ್ರಿಟನ್‌ನಲ್ಲಿ ...

ಸೋವಿಯತ್ ಒಕ್ಕೂಟದ ಗಣರಾಜ್ಯಗಳು ಒಂದೊಂದಾಗಿ ಸ್ವಾತಂತ್ರ್ಯ ಘೋಷಿಸಿ ಒಕ್ಕೂಟ ನಿರ್ನಾಮವಾದ ನಂತರ ಈಗ ಬ್ರಿಟನ್ನಿನ ಸರದಿ ಎಂದು ತೋರುತ್ತಿದೆ. 'ಸೂರ್ಯ ಮುಳುಗದ ರಾಷ್ಟ್ರ' ಎಂದು ಜಂಬ ಕೊಚ್ಚಿಕೊಳ್ಳುತ್ತಿದ್ದ ಬ್ರಿಟನ್ ಅಥವಾ ಯುನೈಟೆಡ್ ಕಿಂಗ್‌ಡಮ್ (ಸಂಯುಕ್ತ ಚಕ್ರಾಧಿಪತ್ಯ) ಒಂದು ಕಾಲದಲ್ಲಿ ಭಾರತ, ಅಮೇರಿಕಾ ಸೇರಿದಂತೆ ಅನೇಕ ರಾಷ್ಟ್ರಗಳನ್ನು ತನ್ನ ವಸಾಹತುಗಳನ್ನಾಗಿ ಮಾಡಿಕೊಂಡು ಅಟ್ಟಹಾಸದಿಂದ ಮೆರೆಯುತ್ತಿತ್ತು. ಕಾಲಕ್ರಮದಲ್ಲಿ ಈ ವಸಾಹತುಗಳು ಯುದ್ಧದ ಮೂಲಕವೋ ಅಥವಾ ಶಾಂತಿಯುತ ಹೋರಾಟಗಳ ಮೂಲಕವೋ ಒಂದೊಂದಾಗಿ ಬ್ರಿಟನ್ನಿನ ಕಪಿಮುಷ್ಟಿಯಿಂದ ಹೊರಬಂದು ಸ್ವತಂತ್ರ ಸಾರ್ವಭೌಮ ರಾಷ್ಟ್ರಗಳಾಗಿ ರೂಪುಗೊಂಡದ್ದು ಹಳೆಯ ಮಾತಾಯಿತು. ಈಗ ಬ್ರಿಟನ್ನಿನ ಒಂದು ಭಾಗವಾಗಿರುವ ಸ್ಕಾಟ್‌ಲ್ಯಾಂಡ್ ಪ್ರತ್ಯೇಕ ಸ್ವತಂತ್ರ ರಾಷ್ಟ್ರವಾಗಿ ರೂಪುಗೊಳ್ಳಲು ಇಚ್ಛಿಸಿ ತನ್ನ ಆಂದೋಲನವನ್ನು ಪ್ರಾರಂಭಿಸಿದೆ. ಮೂರು ಶತಮಾನಗಳಿಂದ ಸಂಯುಕ್ತ ಸಾಮ್ರಾಜ್ಯದ ಒಂದು ಪ್ರಮುಖ ಅಂಗವಾಗಿದ್ದ ಸ್ಕಾಟ್‌ಲೆಂಡ್ ಈಗ ಬೇರೆಯಾದರೆ ಬ್ರಿಟನ್ನಿನ ಅರ್ಥಾತ್ ಸಂಯುಕ್ತ ಚಕ್ರಾಧಿಪತ್ಯದ ಇತಿಹಾಸವೇ ಹೊಸದಾಗಿ ಪ್ರಾರಂಭವಾಗ ಬೇಕಾಗುತ್ತದೆ.

ಹಾಗೆ ನೋಡಿದರೆ ಸ್ವತಂತ್ರ ಸ್ಕಾಟ್‌ಲ್ಯಾಂಡಿನ ಬೇಡಿಕೆ ಹೊಸದೇನಲ್ಲ. ಆದರೂ ಈಗ ಬ್ರಿಟನ್ನಿನ ಕಾಮನ್ಸ್ ಸಭೆಯ (ಸಂಸತ್ತು) ಚುನಾವಣೆಗಳು ಸದ್ಯದಲ್ಲಿಯೇ ನಡೆಯಬೇಕಿರುವುದರಿಂದ ಈ ಬೇಡಿಕೆಗೆ ಹಠಾತ್ ಚಾಲನೆ ದೊರೆತಿದೆ. ಅಧಿಕಾರವನ್ನು ಮತ್ತೆ ತನ್ನ ವಶಕ್ಕೆ ತೆಗೆದುಕೊಳ್ಳಲು ಲೇಬರ್ ಪಕ್ಷ ದೃಢಸಂಕಲ್ಪ ಮಾಡಿದೆ. ಅದೇ ರೀತಿ ಆಡಳಿತ ಪಕ್ಷವಾದ ಲೇಬರ್ ಪಾರ್ಟಿಯ ಪ್ರಧಾನಿ ಜಾನ್ ಮೇಜರ್ ತಮ್ಮ ಸ್ಥಾನವನ್ನು ಉಳಿಸಿಕೊಳ್ಳಲು ಶತ ಪ್ರಯತ್ನ ನಡೆಸುತ್ತಿದ್ದಾರೆ. ಈಗಿನ ಪರಿಸ್ಥಿತಿಯಲ್ಲಿ ಸ್ಕಾಟ್‌ಲ್ಯಾಂಡ್ ಸಂಯುಕ್ತ ಚಕ್ರಾಧಿಪತ್ಯದಿಂದ ತಕ್ಷಣ ಬೇರೆಯಾಗುವ ಸಾಧ್ಯತೆ ಇಲ್ಲವಾದರೂ ಅಧಿಕಾರಕ್ಕಾಗಿ ಸ್ಪರ್ಧಿಸುತ್ತಿರುವ ಎರಡು ರಾಜಕೀಯ ಪಕ್ಷಗಳೂ ಸ್ಕಾಟ್‌ಲ್ಯಾಂಡ್ ಮತದಾರರನ್ನು ಕಡೆಗಣಿಸಲು ಸಾಧ್ಯವಿಲ್ಲ. ಆದುದರಿಂದಲೇ ಪ್ರತ್ಯೇಕ ಸ್ವತಂತ್ರ ರಾಷ್ಟ್ರದ ಬದಲಾಗಿ ಸಂಯುಕ್ತ ಚಕ್ರಾಧಿಪತ್ಯದ ಚೌಕಟ್ಟಿನೊಳಗೇ ಸ್ಕಾಟ್‌ಲ್ಯಾಂಡ್‌ಗೆ ಹೆಚ್ಚಿನ ಅಧಿಕಾರವನ್ನು ನೀಡುವಂತಹ ಒಂದು ರಾಜೀ ಸೂತ್ರವನ್ನು ಲೇಬರ್ ಪಕ್ಷ ಮುಂದೊಡ್ಡಿದೆ. ಆದರೆ ಸ್ವಾತಂತ್ರ್ಯ ಹೋರಾಟವನ್ನು ನಡೆಸುತ್ತಿರುವ ಸ್ಕಾಟಿಷ್ ನ್ಯಾಷನಲ್ ಪಾರ್ಟಿ ಪೂರ್ಣ ಸ್ವಾತಂತ್ರ್ಯಕ್ಕಿಂತ ಕಡಿಮೆಯಾದ ಯಾವುದೇ ವ್ಯವಸ್ಥೆಯನ್ನು ಒಪ್ಪಿಕೊಳ್ಳುತ್ತಿಲ್ಲ. ಜತೆಗೆ ಈಗ ಬ್ರಿಟನ್ ಎದುರಿಸುತ್ತಿರುವ ತೀವ್ರ ಆರ್ಥಿಕ ಹಿಂಜರಿತವೂ ಪ್ರಧಾನಿ ಮೇಜರ್ ಅವರಿಗೆ ಒಂದು ದೊಡ್ಡ ಸವಾಲಾಗಿದೆ. ಏಪ್ರಿಲ್‌ನಲ್ಲಿ ನಡೆಯಲಿರುವ ಚುನಾವಣೆ ಮೇಜರ್ ಅವರ ಹಾಗೂ ಅವರ ಕನ್ಸರ್ವೇಟಿವ್ ಪಕ್ಷದ ಭವಿಷ್ಯವನ್ನು ನಿರ್ಧರಿಸಲಿದೆ.

## ಅಮೇರಿಕದಲ್ಲಿ ...

ಬ್ರಿಟನ್ನಿನಂತೆಯೇ ಅಮೇರಿಕದಲ್ಲೂ ಚುನಾವಣೆಯ ಬಿಸಿ ಪ್ರಾರಂಭವಾಗಿದೆ. ನವೆಂಬರ್ ತಿಂಗಳಲ್ಲಿ ಅಮೇರಿಕಾಧ್ಯಕ್ಷರ ಚುನಾವಣೆ ನಡೆಯಬೇಕಾಗಿದೆ. ಅದಕ್ಕೆ ಪೂರ್ವ ಭಾವಿಯಾಗಿ ಅಮೇರಿಕದ ಸಂಪ್ರದಾಯದಂತೆ ಮುಖ್ಯ ರಾಜಕೀಯ ಪಕ್ಷಗಳಾದ ರಿಪಬ್ಲಿಕನ್ ಹಾಗೂ ಡೆಮಾಕ್ರಟಿಕ್ ಪಕ್ಷಗಳು ತಮ್ಮ ಅಧಿಕೃತ ಅಭ್ಯರ್ಥಿಯನ್ನು ಆಯ್ಕೆ ಮಾಡಬೇಕಾಗುತ್ತದೆ. ಇದೊಂದು ಗೋಜಲು ಪ್ರಕ್ರಿಯೆ. ಮೊದಲು ರಾಷ್ಟ್ರದ ವಿವಿಧ ಭಾಗಗಳಲ್ಲಿ ನಡೆಯುವ ಪ್ರೈಮರಿ ಚುನಾವಣೆಗಳಲ್ಲಿ ಅಭ್ಯರ್ಥಿ, ಡೆಲಿಗೇಟರುಗಳ ಬಹುಮತ ನಿರ್ಣಯವಾಗುತ್ತದೆ. ಜುಲೈ-ಆಗಸ್ಟ್ ತಿಂಗಳುಗಳಲ್ಲಿ ನಡೆಯಲಿರುವ ಪಕ್ಷಗಳ ರಾಷ್ಟ್ರೀಯ ಅಧಿವೇಶನಗಳಲ್ಲಿ ಡೆಲಿಗೇಟ್‌ಗಳು ಅಂತಿಮವಾಗಿ ತಮ್ಮ ಪಕ್ಷದ ಅಭ್ಯರ್ಥಿಯನ್ನು ಆಯ್ಕೆ ಮಾಡುತ್ತಾರೆ. ಈಗಾಗಲೇ ಪ್ರೈಮರಿಗಳು ಶುರುವಾಗಿದ್ದು ಪ್ರಸಕ್ತ ರಾಷ್ಟ್ರಾಧ್ಯಕ್ಷರಾಗಿರುವ ಜಾರ್ಜ್ ಬುಷ್ ತಮ್ಮ ಪಕ್ಷದ ಇನ್ನೊಬ್ಬ ಅಭ್ಯರ್ಥಿ ಪ್ಯಾಟ್ರಿಕ್ ಬುರ್ಚನ್‌ರಿಂದ ಪ್ರಬಲ ಸ್ಪರ್ಧೆಯನ್ನು ಎದುರಿಸುತ್ತಿದ್ದಾರೆ. ಈಗಾಗಲೇ ನ್ಯೂಹ್ಯಾಂಪ್‌ಷೈರ್ ಪ್ರೈಮರಿಯಲ್ಲಿ ಬುರ್ಚನ್ ಅವರಿಗೆ ನಿರೀಕ್ಷೆಗೂ ಮೀರಿ ಅಧಿಕ ಬೆಂಬಲ ವ್ಯಕ್ತವಾಗಿರುವುದು ಬುಷ್ ಅವರ ಪ್ರತಿಷ್ಠೆಗೆ ಭಾರೀ ಏಟು. ಸಾಮಾನ್ಯ ಸಂದರ್ಭಗಳಲ್ಲಿ ಅಧಿಕಾರಾರೂಢ ಅಧ್ಯಕ್ಷರು ಎರಡನೆಯ ಬಾರಿಗೆ ಪಕ್ಷದ ನಾಮಕರಣ ಪಡೆಯುವುದು ಕಷ್ಟವೇನಲ್ಲ. ಅಂತೆಯೇ ಬುಷ್ ಅವರು ಪಕ್ಷದ ನಾಮಕರಣ ಪಡೆಯುವಲ್ಲಿ ಯಶಸ್ವಿಯಾಗುವರಾದರೂ ಬುರ್ಚನ್ ಅವರಿಗೆ ವ್ಯಕ್ತವಾಗುತ್ತಿರುವ ಅಪಾರ ಬೆಂಬಲ ಅವರನ್ನು ಚಿಂತೆಗೀಡು ಮಾಡಿದೆ. ಇದು ನವೆಂಬರ್ ಚುನಾವಣೆಗಳಲ್ಲಿ ಡೆಮಾಕ್ರಟಿಕ್ ಪಕ್ಷಕ್ಕೆ ಅನುಕೂಲಕರವಾಗಲೂಬಹುದು- ಹಿಂದಿನ ಅಧ್ಯಕ್ಷರುಗಳಾದ ನಿಕ್ಸನ್, ರೇಗನ್ ಮುಂತಾದವರು ಅಂತಾರಾಷ್ಟ್ರೀಯ ವ್ಯವಹಾರಗಳಲ್ಲಿ ಕೆಟ್ಟ ಹೆಸರುಗಳಿಸಿದ್ದರೂ ಆಂತರಿಕವಾಗಿ ತಮ್ಮ ಜನಪ್ರಿಯತೆಯನ್ನು ಉಳಿಸಿಕೊಂಡಿದ್ದರು. ಆದರೆ ಬುಷ್ ಅಂತರರಾಷ್ಟ್ರೀಯವಾಗಿ ಈಗ ಒಳ್ಳೆಯ ಹೆಸರು ಗಳಿಸಿದ್ದರೂ, ಆಂತರಿಕವಾಗಿ ಅವರ ಹಲವಾರು ಕ್ರಮಗಳಿಂದ ಅವರ ಜನಪ್ರಿಯತೆ ಮಸುಕಾಗಿದೆ. ಇದೊಂದು ವಿಚಿತ್ರ ಪರಿಸ್ಥಿತಿ.

## ಪಶ್ಚಿಮ ಏಷ್ಯಾದಲ್ಲಿ ...

ಹಲವು ದಶಕಗಳಿಂದ ಪ್ರಕ್ಷುಬ್ಧ ರಾಜಕೀಯ ಪರಿಸ್ಥಿತಿಯಲ್ಲಿ ಸಿಲುಕಿರುವ ಪಶ್ಚಿಮ ಏಷ್ಯಾದಲ್ಲಿ ಶಾಂತಿ ಸ್ಥಾಪಿಸುವ ಬಗೆಗೆ ಕಳೆದ ಆರು ತಿಂಗಳಿಂದ ಅಮೇರಿಕದ ನೇತೃತ್ವದಲ್ಲಿ ನಡೆಯುತ್ತಿರುವ ಮಾತುಕತೆಗಳಲ್ಲಿ ಯಾವ ಪ್ರಗತಿಯೂ ಆಗಿಲ್ಲ. ಪ್ರತಿಯಾಗಿ ಈ ಪ್ರದೇಶದಲ್ಲಿ ಹಿಂಸಾಚಾರಗಳು ಹೆಚ್ಚುತ್ತಿವೆ. ಈ ಪ್ರದೇಶದ ವಿವಾದದ ಮುಖ್ಯ ಕೇಂದ್ರಗಳಾದ ಇಸ್ರೇಲ್ ಹಾಗೂ ಪ್ಯಾಲಸ್ಟೈನ್‌ನ ನಾಯಕರುಗಳು ಶಾಂತಿ ಮಾತುಕತೆಗಳಲ್ಲಿ ಭಾಗವಹಿಸಲು ಸಮ್ಮತಿ ವ್ಯಕ್ತಪಡಿಸಿರುವರಾದರೂ ಈ ಮುಖಂಡರು ತಮ್ಮ ಹಿಂದಿನ ನಿಲುವುಗಳಿಗೇ ಅಂಟಿಕೊಂಡಿರುವುದು ಈ ಮಾತುಕತೆಗಳ ಪ್ರಗತಿಗೆ ಅಡ್ಡಿಯಾಗಿದೆ. ಆಕ್ರಮಿತ ಪ್ರದೇಶದಲ್ಲಿ ಯಹೂದಿಗಳಿಗೆ ಪುನರ್‌ವಸತಿ ಕಲ್ಪಿಸುವ ವಿಷಯದಲ್ಲಿ ಯಾವುದೇ ಬದಲಾವಣೆಗೆ ಇಸ್ರೇಲ್ ಒಪ್ಪುತ್ತಿಲ್ಲ. ಹಾಗೆಯೇ ಈ ಪುನರ್‌ವಸತಿ ಕಾರ್ಯವನ್ನು ನಿಲ್ಲಿಸುವವರೆಗೆ ಶಾಂತಿ ಬಗೆಗೆ ಚರ್ಚಿಸಲು ಪ್ಯಾಲಸ್ಟೀನಿಯನ್ ನಾಯಕರು ತಯಾರಾಗಿಲ್ಲ. ಪ್ಯಾಲಸ್ಟೀನಿಯನರು ಹೋರಾಟಕ್ಕೆ ಬೆಂಬಲ ವ್ಯಕ್ತಪಡಿಸಿರುವ ಇತರ ಅರಬ್ ನಾಯಕರ ನಿಲುವೂ ಇದೇ ಆಗಿರುವುದು ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸಿದೆ.

ಇಸ್ರೇಲ್‌ನಲ್ಲೂ ಸದ್ಯದಲ್ಲಿಯೇ ಚುನಾವಣೆಗಳು ನಡೆಯಬೇಕಾಗಿರುವುದರಿಂದ ಈ ಮಾತುಕತೆಗಳಿಂದ ಸಮೀಪದ ಭವಿಷ್ಯದಲ್ಲಿ ಯಾವುದೇ ಫಲ ದೊರೆಯುವ ನಿರೀಕ್ಷೆಯಲ್ಲಿ ಈ ಚುನಾವಣೆಯಲ್ಲಿ ಸ್ಪಷ್ಟ ಬಹುಮತ ಪಡೆಯಲು ಅಧಿಕಾರಾರೂಢ ಲಿಕುಡ್ ಪಕ್ಷ ಹಾಗೂ ಪ್ರತಿಪಕ್ಷವಾದ ಲೇಬರ್ ಪಾರ್ಟಿಗಳು ಶತಾಯ ಗತಾಯ ಪ್ರಯತ್ನಗಳನ್ನು ನಡೆಸುತ್ತಿವೆ. ಪ್ರಸ್ತುತ ಅಧಿಕಾರದಲ್ಲಿರುವ ಲಿಕುಡ್ ಪಕ್ಷ ಕೇವಲ ಒಂದೇ ಒಂದು ಮತದ ಬಹುಮತ ಹೊಂದಿದ್ದು ನಿರ್ಣಾಯಕ ವಿಷಯಗಳಲ್ಲಿ ಯಾವುದೇ ನಿರ್ಧಾರ ತಳೆಯಲು ಕಷ್ಟಪಡುತ್ತಿದೆ. ಆದುದರಿಂದ ಈ ಚುನಾವಣೆಯಲ್ಲಾದರೂ ಸ್ಪಷ್ಟ ಬಹುಮತ ಗಳಿಸಲು ಈ ಪಕ್ಷ ಸಂಕಲ್ಪಿಸಿದೆ. ಇಸ್ರೇಲ್‌ನಲ್ಲಿ ಚುನಾವಣೆಗಳು ಮುಗಿದು ಯಾವುದೇ ಒಂದು ಪಕ್ಷ ಅಧಿಕಾರಕ್ಕೆ ಬರುವವರೆಗೆ ಪಶ್ಚಿಮ ಏಷ್ಯಾ ಶಾಂತಿ ಮಾತುಗಳಲ್ಲಿ ಯಾವುದೇ ಪ್ರಗತಿ ಸಾಧ್ಯವಿಲ್ಲ. **

## ಯುಗಾದಿಗೆ ಬೆಳ್ಳಿ ತೇರು

**ಈ ಸಂಚಿಕೆಯ ಮೂರನೆ ಪುಟದಲ್ಲಿ ಅಚ್ಚಾಗಿರುವ ಓದುಗರಿಗೆ ಉಗಾದಿಯ ಶುಭಾಶಯಗಳನ್ನು ಹೊತ್ತು ತಂದ 'ಬೆಳ್ಳಿ ತೇರು' ಮಾರುತಿ ನಗರದ (ಬೆಂಗಳೂರಿನ) ಶ್ರೀಮತಿ ಹೆಚ್. ಗಂಗಮ್ಮನವರ ಕೈಚಳಕ. ಕಷ್ಟವಲ್ಲ ಆದರೂ ಈ ಬೆಳ್ಳಿ ತೇರು ಅಷ್ಟು ಸರಳವೂ ಅಲ್ಲ. ಸರಳರೇಖೆ, ವಕ್ರರೇಖೆ ಹಾಗೂ ವರ್ತುಲಗಳ ವಿನ್ಯಾಸ ಇದರ ವೈಶಿಷ್ಟ್ಯ. ಕಲಾತ್ಮಕ ಅಭಿವ್ಯಕ್ತಿಗೆ ಸಾಕಷ್ಟು ಅವಕಾಶ ಇದೆ. ನೋಡಿದೊಡನೆ ಗ್ರಹಿಸುವ ಅಭಿಜಾತ ಕಲಾವಿದೆಯರಾದ ಮಹಿಳೆಯರಿಗೆ ಇದರ ರಚನೆಯ ಕುರಿತು ವಿವರಗಳನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಬಣ್ಣ ತುಂಬಿದರೆ ಯುಗಾದಿ ಹಬ್ಬಕ್ಕೆ ಈ ತೇರು ನಿಮ್ಮ ಮನೆಯಂಗಳಕ್ಕೆ ಹೊಸ ಅಂದ ತರುವಲ್ಲಿ ಸಂದೇಹವಿಲ್ಲ.**



# ಯುಗಾದಿ ಬಂತು ವಸಂತನ ಕರೆತಂತು

"ಯುಗಾದಿ" ಹೊಸವರ್ಷದ, ಹೊಸದಿನದ ಅತ್ಯಂತ ಸಂಭ್ರಮದ ಹಬ್ಬ. ಯುಗಾದಿ ಹೆಸರೇ ಸೂಚಿಸುವಂತೆ ಇದು ಯುಗದ ಆದಿಯೂ ಹೌದು, ಆರಂಭವೂ ಹೌದು. ವಸಂತ ಚೈತನ್ಯದ ಮುಂಬೆಳಗೇ ಯುಗಾದಿ. ಚೈತ್ರಶುದ್ಧ ಪ್ರತಿಪದೆ ವಸಂತಾಗಮನಕ್ಕೆ ಸುಮುಹೂರ್ತ. ಹಚ್ಚ ಹಸಿರು ಡುಗೆಯೊಂದಿಗೆ ಪಲ್ಲವಿತ ಪ್ರಕೃತಿಯಲ್ಲಿ ಆಚರಿಸುವ ಉತ್ಸಾಹದಾಯಕ ಹಬ್ಬವೇ ಯುಗಾದಿ. ಈ ಹಬ್ಬ ಪ್ರತಿ ಸಂವತ್ಸರವೂ ಬರುವುದಾದರೂ ಬರುವಾಗಲೆಲ್ಲ ನಮ್ಮ ಬಾಳಿಗೆ ಹೊಸದನ್ನು ಹೊತ್ತು ತರುತ್ತದೆ ಎಂಬ ನಂಬಿಕೆ ನಮ್ಮದು.

ಯುಗಾದಿಯ ದಿನ ಶುಭದಿನ. ಅಂದು ಯಾವುದೇ ಶುಭಕಾರ್ಯ ಮಾಡಲು ಮುಹೂರ್ತ ನೋಡಬೇಕಾಗಿಲ್ಲ. ಗೃಹಪ್ರವೇಶ, ಅಂಗಡಿ ಉದ್ಘಾಟನೆ ಇತ್ಯಾದಿ ಶುಭಕಾರ್ಯಗಳನ್ನು ಮಾಡಬಹುದು. ಯುಗಾದಿ ಬಾಳಿನಲ್ಲಿ ಹೊಸತನ್ನು ತರುವ ಹಬ್ಬವಾದುದರಿಂದ ಎಲ್ಲರೂ ಈ ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಾರೆ. ತೈಲಾಭ್ಯಂಜನ ಮಾಡುತ್ತಾರೆ. ಹೊಸ ಬಟ್ಟೆ ಉಡುತ್ತಾರೆ. ಈ ದಿನ ಬ್ರಹ್ಮನು ವಿಶ್ವವನ್ನು ಸೃಷ್ಟಿಸಿ ಕೃತಯುಗಕ್ಕೆ ಕಾಲಿಟ್ಟ ದಿನವೆಂದು ಪುರಾಣಗಳು ಹೇಳುತ್ತವೆ. ಯುಗಾದಿಯಂದು ಕೆಲವೆಡೆ ಬ್ರಹ್ಮ ಪೂಜೆಯೂ ನಡೆಯುತ್ತದೆ. ಉತ್ತರ ಕನ್ನಡ, ಮಹಾರಾಷ್ಟ್ರಗಳಲ್ಲಿ ಯುಗಾದಿಯನ್ನು "ಗುಡಿಪಾಡವಾ" ಎಂದು ಕರೆಯುತ್ತಾರೆ. 'ಗುಡಿ' ಎಂದರೆ ಧ್ವಜವೆಂದೂ, 'ಪಾಡವಾ' ಎಂದರೆ 'ಪಾಡ್ಯ-ಪ್ರತಿಪದೆ' ಎಂದೂ ಅರ್ಥವಾಗುತ್ತದೆ. ಒಂದು ಕೋಲಿಗೆ ಬಣ್ಣದ ಬಟ್ಟೆಯನ್ನು ಸಿಕ್ಕಿಸಿ ಅದರ ಮೇಲೆ ಕಳಶ (ತಂಬಿಗೆ) ಒಂದನ್ನು ಬೋರಲಾಗಿ ಹಾಕಿ, ಅದನ್ನು ಬೇವಿನ ತೋರಣದಿಂದ ಸಿಂಗರಿಸಿ ಮನೆಯ ಮಾಡಿನ ಮೇಲೆ ಏರಿಸುತ್ತಾರೆ. ಇದು ಶಾಲಿವಾಹನನು ಶಕರ ಮೇಲೆ ಸಾಧಿಸಿದ ವಿಜಯೋತ್ಸವದ ಪ್ರತೀಕವೆಂದೂ ಹೇಳುತ್ತಾರೆ...

ಯುಗಾದಿಯಂದು ಮನೆಮನೆಗಳಲ್ಲಿ ಮೃಷ್ಟಾನ್ನ ಭೋಜನ, ಹೋಳಿಗೆಯೂಟವಿರುತ್ತದೆ. ಊಟವಾದ ಮೇಲೆ ಪಂಚಾಂಗ ಶ್ರವಣ ಮಾಡುವುದು ಈ ಹಬ್ಬದಾಚರಣೆಯ ಒಂದು ಮುಖ್ಯವಿಧಿ. ಹೊಸ ವರ್ಷದ ಹೊಸ ದಿನವಾದ ಇಂದು ಪಂಚಾಂಗ ಶ್ರವಣ ಮಾಡುವುದರಿಂದ ಪಾಪ ಪರಿಹಾರವಾಗಿ, ಆರೋಗ್ಯ ಹೆಚ್ಚಾಗಿ, ಆಯುಷ್ಯ ಹೆಚ್ಚಾಗುತ್ತದೆ ಎಂಬ ನಂಬಿಕೆ ಇದೆ. ಈ ದಿನದಂದು ಜ್ಯೋತಿಶ್ಯಾಸ್ತ್ರದ ಪ್ರಕಾರ ಹೊಸ ವರ್ಷ ಶುಭ-ಅಶುಭಗಳ, ಮಳೆ-ಬೆಳೆಗಳ ತರ್ಕವೂ ನಡೆಯುತ್ತದೆ. ಇಂದು ಚಂದ್ರದರ್ಶನ ಶುಭಕರವೆಂಬ ನಂಬಿಕೆಯೂ ಇದೆ.

ಯುಗಾದಿಯಂದು ತಮಗಾದ ಶುಭ ಹಾಗೂ ಜಯಗಳು ಇಡೀ ವರ್ಷ ತಮಗಾಗುವ ಜಯ ಮತ್ತು ಶುಭಗಳ ಪ್ರತೀಕವೆಂದು ಜನ ತಿಳಿಯುತ್ತಾರೆ. ಅದಕ್ಕಾಗಿಯೇ ಯುಗಾದಿ ದಿನದಂದು ಅನೇಕ ಸ್ಪರ್ಧಾತ್ಮಕ ಆಟಗಳು ನಡೆಯುತ್ತವೆ. ಅವುಗಳಲ್ಲಿ 'ಐದಣ' ಕಿತ್ತುಕೊಳ್ಳುವ ಆಟ ಸರ್ವರ ದೃಷ್ಟಿಯನ್ನು ಕೇಂದ್ರೀಕರಿಸಿಕೊಳ್ಳುವ ಆಟವಾಗಿದೆ. ಇದು ಶಕ್ತಿ ಪ್ರದರ್ಶನದ ಆಟ. ಒಂದು ಕೊಬ್ಬಿದ ಹೋರಿಯನ್ನು ತಂದು ಅದರ ಕೊಂಬಿಗೆ 'ಐದಣ' ಎನ್ನುವ ಬಹುಮಾನ ಕಟ್ಟಿರುತ್ತಾರೆ. ಶಕ್ತಿವಂತ ತರುಣರು ಹೋರಿಯನ್ನು ಅಡ್ಡಗಟ್ಟಿ ಐದಣವನ್ನು ಕಿತ್ತುಕೊಳ್ಳಬೇಕು. ಹೋರಿಗೆ ಮೂಗುದಾರ ಇರುವುದಿಲ್ಲ.

ಯುಗಾದಿಯಂದು ಊರ ದೇವರುಗಳ ಪೂಜೆ ಮೆರವಣಿಗೆಗಳೂ ನಡೆಯುತ್ತವೆ. ಈ ದಿನ ದಿವಂಗತರಿಗೆ ಎಡೆಯಿಕ್ಕುವ ಸಂಪ್ರದಾಯವೂ ನಮ್ಮಲ್ಲಿದೆ.

## ಬೇವು-ಬೆಲ್ಲ

ಬೇವು-ಬೆಲ್ಲಗಳ ಮಿಶ್ರಣದ ಸೇವನೆ ಯುಗಾದಿ ಹಬ್ಬದ ಮಹತ್ವ ವಿಧಿ. ಬದುಕಿನಲ್ಲಿ ಸಿಹಿಕಹಿಗಳು ಸಮನಾಗಿ ಇರಬೇಕು ಎಂಬ ಭಾವನೆಯೇ ಇದರ ಹಿಂದಿದೆ. ಸುಖ-ದುಃಖ, ಸೋಲು-ಗೆಲುವು, ಬೆಳಗು-ಕತ್ತಲು ನಿಸರ್ಗದ ಮೂಲಭೂತ ನಿಯಮವೇ ಆಗಿದೆ. ಹಾಗೆಯೇ ಸಿಹಿ-ಕಹಿಗಳು ಮಾನವನ ಬದುಕಿನ ಅವಿಭಾಜ್ಯ ಅಂಶಗಳೇ ಹೌದು. ಈ ಸಾರ್ವಕಾಲಿಕ ಸತ್ಯದ ನೆನಪಿಗೆಂದೇ ಹೊಸ ವರ್ಷದ ಹೊಸ ದಿನದ ಯುಗಾದಿ ಉತ್ಸವದಂದು ಬೇವು-ಬೆಲ್ಲದ ಸೇವನೆ ನಡೆಯುತ್ತದೆ.



ಬೇವು ಆರೋಗ್ಯದಾಯಕವೂ ಹೌದು. ನಮಗೆ ಅದು ವಜ್ರದೇಹವನ್ನು ಕೊಡುತ್ತದೆ ಎಂಬ ನಂಬಿಕೆ ಇದೆ. ಬೇವನ್ನು ಕುರಿತು ಪಂಡಿತರು ಹೇಳುತ್ತಾರೆ—

"ಶತಾಯು ವಜ್ರ ದೇಹಾಯ
ಸರ್ವ ಸಂಪತ್ಕರಾಯ ಚ
ಸರ್ವಾರಿಷ್ಟ ವಿನಾಶಾಯ
ನಿಂಬಕಂ ದಳ ಭಕ್ಷಣಂ."

ಹೀಗೆ ನಮ್ಮ ಬದುಕಿನಲ್ಲಿ ಬೇವಿಗೂ ಒಂದು ಸ್ಥಾನವಿದೆ. ಕಹಿಯಾಗಿರುವ ಬೇವು ಮಾನವನ-ಬದುಕಿನಲ್ಲಿ ಆರೋಗ್ಯ ಹಾಗೂ ಸಂಪತ್ತು ಗಳಿಸ ಬೇಕೆಂದರೆ ಕಷ್ಟಪಡಬೇಕು ಎಂಬುದರ ಸಂಕೇತವೂ ಆಗಿದೆ. ಕಷ್ಟಪಟ್ಟಾಗಲೇ ಬದುಕು ಸಿಹಿಯಾಗುವುದು ಎಂಬ ಬೋಧನೆಯೂ ಇಲ್ಲಿದೆ.

## ವಸಂತನಾಗಮನ

ಯುಗಾದಿಯನ್ನು ಮಧುಮಹೋತ್ಸವ ಎಂದೂ ಹೇಳುತ್ತಾರೆ. ಚೈತ್ರದಿಂದಲೇ ವಸಂತ ಋತುವಿನ ಆರಂಭವಾಗುತ್ತದೆ. ಕಾಮನ ಹಬ್ಬದ ದಿನದಿಂದಲೇ ವಸಂತನಾಗಮನದ ಸೂಚನೆಗಳು ದೊರೆಯುತ್ತವೆ. ಆದರೆ ಪ್ರಕೃತಿ ಪಲ್ಲವಿತಗೊಂಡು ಮಧುಮಾಸಕ್ಕೆ ಪರಿಪೂರ್ಣತೆ ಬರುವುದು ಚೈತ್ರದಿಂದಲೇ ಹೌದು. ಇದನ್ನು ಕವಿ ಕೆ. ಎಸ್. ಎನ್.ರ ಬಾಯಲ್ಲೇ ಕೇಳಿ,

"ಪರಿಮಳದ ತಂಗಾಳಿ ಹರಿದಾಡಿತು ;
ದುಂಬಿಗಳ ಸಂಗೀತ ಮೊದಲಾಯಿತು ;
ಬಿರಿದರಳ ಬಣ್ಣಗಳ, ಹೊಳೆ ಹರಿಯಿತು ;
ಚೈತ್ರ, ವೈಶಾಖ—ವಸಂತ ಋತು."

ಪ್ರಕೃತಿಗೆ ಚೈತನ್ಯ ನೀಡುವ ವಸಂತನಾಗಮನ ಹೆಚ್ಚೂ ಕಡಿಮೆ ಎಲ್ಲ ಕವಿಗಳಲ್ಲೂ ಹೊಸ ಉತ್ಸಾಹ ತುಂಬುತ್ತದೆ, ಎಂಬುದಕ್ಕೆ ಹಲವಾರು ಕವಿಗಳು ವಸಂತನನ್ನು ವರ್ಣಿಸಿದುದೇ ಸಾಕ್ಷಿಯಾಗಿದೆ. ಮಹಾಕವಿ ಕಾಳಿದಾಸ ಋತುವರ್ಣನೆಗಾಗಿ ತನ್ನ ಒಂದು ಇಡೀ ಕಾವ್ಯವನ್ನೇ ಮೀಸಲಾಗಿಟ್ಟ. 'ಋತು ಸಂಹಾರ' ಕೃತಿ ಅವನ ಪ್ರಕೃತಿ-ಪ್ರೇಮಕ್ಕೆ ಸಾಕ್ಷಿಯಾಗಿದೆ. ಪ್ರಾಚೀನ ಕವಿಗಳೆಲ್ಲಾ ವಸಂತಋತುವಿನ ಪ್ರೇರಣೆಗೆ ಸಿಲುಕಿಯೇ ಇದ್ದಾರೆ.

ಯುಗಾದಿ ವಸಂತ ಚೈತನ್ಯದಿಂದ ಮುಂಬೆಳಗು ವಸಂತ ಋತು ಸಮೃದ್ಧಿಯ ಸಂಕೇತವೂ ಹೌದು. ಈ ಸಮೃದ್ಧಿಯ ಸಮಯದಲ್ಲಿ ಬರುವ ಯುಗಾದಿ ಸಂಭ್ರಮ ಹಾಗೂ ಸಂತೃಪ್ತಿಯ ಹಬ್ಬವೇ ಹೌದು ಇದನ್ನೇ ಒಂದು ಶ್ಲೋಕ ಹೀಗೆ ಹೇಳುತ್ತದೆ.

"ವಾಪೀಜಲಾನಂ ಮಣಿಮೇಖಲಾನಾಂ
ಶಶಾಙ್ಕಭಾಸಾಂ ಪ್ರಮುದಾಜನಾನಾಮ್
ಚುಂತ್ರದ್ರುಮಾಣಾಂ ಕುಸುಮಾನ್ವಿತಾನಾಂ
ದದಾತಿ ಸೌಭಾಗ್ಯಮಯಂ ವಸನ್ತಃ"

ಯುಗ ಯುಗಕಳೆದರೂ ಮತ್ತೆ ಮರಳಿ ಬರುವ ಯುಗಾದಿ ಹೊಸತನವನ್ನೇ ಹೊತ್ತು ತರುತ್ತದೆ ಎನ್ನುತ್ತಾರೆ. ವರಕವಿ ಬೇಂದ್ರೆ. ಹೊಸ ವರ್ಷ-ದೊಂದಿಗೆ ಬರುವ ವಸಂತ ಋತುವನ್ನು ಕುರಿತು ಕವಿ ಕೆ. ಎಸ್. ಎನ್. ಹೇಳುತ್ತಾರೆ—

ಓ ಒಲವೇ, ನಿನ್ನ ವರ್ಷೋದಯಗೀತವನು
ಕೇಳುವೇನು ಮೈಮರೆತು ನೆರಳಿನಲಿ ;
ಹೂವ ಬಳಸುವ ದುಂಬಿದನಿಯನನುಕರಿಸು
ವೆನು
ಕಾಡ ಬಿದಿರಿನ ನನ್ನ ಕೊಳಲಿನಲಿ.

ಮೃದು ವಸಂತವೇ, ನೆಲದ ಹೃದಯ
ಚಿಮ್ಮಿದ ಒಲವೆ
ಹೊಸ ವರುಷ ತೆರೆದ ತಳಿರಿನ ಬಾಗಿಲೆ—
ಕೊರೆವ ಚಳಿಯೂ ಇರದ ಉರಿವ ಬಿಸಿಲೂ
ಇರದ
ಹರುಷವೇ, ನನ್ನೊಲವೆ, ಬಾಳ ಚೆಲುವೆ

ಈ ತೆರನಾಗಿ ವಸಂತನನ್ನು ಕುರಿತು ಬಹಳಷ್ಟು ಜನ ಹಾಡಿ ಹೊಗಳಿದ್ದಾರೆ. ವಸಂತ ಋತು ಯುಗಾದಿ ಸಂಭ್ರಮಕ್ಕೆ ಹೊಸ ಹುರುಪು ನೀಡುತ್ತದೆ. ಇಂಗ್ಲೀಷರಿಗೆ ಜನವರಿ ತಿಂಗಳು ಹೊಸ ವರ್ಷವಾದರೆ ನಮಗೆ ಚೈತ್ರ ಹೊಸ ವರ್ಷದ ತಿಂಗಳು. ಹೊಸತನದ ಪ್ರತೀಕವಾಗಿ ಆಚರಿಸುವ ಹಬ್ಬ ಯುಗಾದಿ. ಇದು ವಸಂತನು ಬದುಕಿನಲ್ಲಿ ಹೊಸತನ ನೀಡಿದ ಸಮಯ. ಕೋಗಿಲೆಗಳ ಪಲ್ಲವ, ಅರಳಿದ ವಿಭಿನ್ನ ಪುಷ್ಪಗಳ ಸುವಾಸನೆಗಳಿಂದ ಕೂಡಿದ ಪ್ರಕೃತಿಯೊಂದಿಗೆ ಆಚರಿಸುವ ಹಬ್ಬವೇ ಯುಗಾದಿ. ಪ್ರಕೃತಿಯಲ್ಲಾಗುವ ಬದಲಾವಣೆಯನ್ನು ವಿ. ಸೀತಾರಾಮಯ್ಯ ನವರು ಹೀಗೆ ಹೇಳುತ್ತಾರೆ—

"ಎಲ್ಲ ತರುಗಳು ತಳಿರ್ದ ಮುನ್ನವೇ
ತಳಿರ್ವಿಡಿದ
ಬಿಲ್ವಬೇಲ ತಮಾಲ ಮೊದಲೇ ಬಂದು
ಎಲ್ಲವನು ಆಳ್ವರಸ ವಸಂತನೆಂದು ಸಾರು
ತ್ತಿವೆ
ಎಲ್ಲ ಪರಿಜೀವನವು ಹೊಸತಪ್ಪುದೆಂದು".

ಒಟ್ಟಿನಲ್ಲಿ ಯುಗಾದಿ ಹೊಸ ವರ್ಷದ ಹೊಸ ದಿನದ ಸಂಭ್ರಮದ ಉತ್ಸವ. ಅದರೊಂದಿಗೆ ಪಲ್ಲವಿತ ಪ್ರಕೃತಿಯ ಪೂರ್ಣ ಮೇಳ, ಮಧುಮಾಸದ ಚೈತನ್ಯ. ಶಾಂತಿ, ಸಮೃದ್ಧಿ, ಸಂತೃಪ್ತಿಯ ಸಂದೇಶವೂ ಹೌದು. ಮುಂಬರುವ ರಾಮನವಮಿ ಆಚರಣೆಗೂ ಇದೇ ನಾಂದಿಯಾಗುತ್ತದೆ. ಯುಗಾದಿ ಸರ್ವರಿಗೂ ಶುಭ ತರಲಿ ಎಂದು ಆಶಿಸುವಾ.

— ಅನಸೂಯಾ

A. S. Murti

ಮಿನಿಕಥೆ:

# ಗಾಸಿಪ್



ಆರ್. ಪುಷ್ಪ

ಗಡಿಯಾರದ ಮುಳ್ಳು ಆಗಲೇ ಹತ್ತು ಗಂಟೆ ಇಪ್ಪತ್ತೈದು ನಿಮಿಷ ತೋರಿಸುತ್ತಿತ್ತು. ಹತ್ತೂವರೆಗೆ ಕೇವಲ ಐದು ನಿಮಿಷಗಳು ಮಾತ್ರ ಉಳಿದಿವೆ! ನನಗೀಗ ರೆಕ್ಕೆಗಳು ಹುಟ್ಟಿ ಹಾರಿಕೊಂಡು ಹೋದರೂ ಇನ್ನೈದು ನಿಮಿಷಗಳಲ್ಲಿ ಬ್ಯಾಂಕಿಗೆ ಹೋಗುವುದು ಕಷ್ಟಸಾಧ್ಯವಾಗಿತ್ತು. ಒಂದೆರಡು ನಿಮಿಷ ತಡವಾದರೂ ಅಟೆಂಡೆನ್ಸ್ ಮುಂದೆ ನಿಂತು ಗುರುಗುಟ್ಟುವ ಮ್ಯಾನೇಜರನ್ನು ನೆನೆದೇ ಎದೆ ಹೊಡೆದುಕೊಳ್ಳುತ್ತಿತ್ತು. ಆಟೋಗಾಗಿ ನನ್ನ ಕಣ್ಣುಗಳು ಪರದಾಡುತ್ತಿರುವಾಗಲೇ ಎದುರಿನಿಂದ ನನ್ನ ಸಹೋದ್ಯೋಗಿ ಕಿರಣ ಸ್ಕೂಟರಿನಲ್ಲಿ ಬರುವುದು ಕಾಣಿಸಿತು. ನನ್ನನ್ನು ಕಾಣುತ್ತಿದ್ದ ಹಾಗೇ "ಬ್ಯಾಂಕಿಗಾ ಮೇಡಂ?" ಎನ್ನುತ್ತಾ ತಮ್ಮ ಸ್ಕೂಟರನ್ನು ನಿಧಾನಗೊಳಿಸಿದರು. ಕ್ಷಣಾರ್ಧದಲ್ಲಿ ನಾನವರ ಸ್ಕೂಟರಿನ ಪಿಲಿಯನ್ ಮೇಲಿದ್ದೆ!

ಅಂತೂ ಇಂತೂ ಹತ್ತೂವರೆಗೆ ಸರಿಯಾಗಿ ಬ್ಯಾಂಕಿನ ಹತ್ತಿರವಿದ್ದೆ. ಕಿರಣನ ಸ್ಕೂಟರಿನಿಂದ ಇಳಿಯುತ್ತಿದ್ದ ಹಾಗೇ ಇನ್ನಿತರ ಸಹೋದ್ಯೋಗಿಗಳ ಕಣ್ಣುಗಳು ನನ್ನ ಮೇಲೆ ತೀಕ್ಷ್ಣವಾಗಿ ಹರಿದಾಡುತ್ತಿರುವುದನ್ನು ಗಮನಿಸಿಯೂ ಗಮನಿಸದವಳಂತೆ ಬ್ಯಾಂಕಿನೊಳಗೆ ಹೋದವಳೇ ಅಟೆಂಡೆನ್ಸ್‌ಗೆ ಸಹಿಮಾಡಿ ನನ್ನ ಕೌಂಟರಿನಲ್ಲಿ ಕುಳಿತೆ. ಅಂದಿನಿಂದ ಶುರುವಾಯ್ತು ಈ ಗಾಸಿಪ್‌ಗಳ ಭರಾಟೆ!

ಹದಿನೈದು ಜನ ಕೆಲಸ ಮಾಡುವ ಚಿಕ್ಕ ಬ್ರಾಂಚು ನಮ್ಮದು. ಇಲ್ಲಿ ಯಾರು ಸೀನಿದರೂ ಕೂಡ ಅದು ಗುಟ್ಟಾಗಿ ಉಳಿಯುವುದಿಲ್ಲ. ಅಂದು ಆಕಸ್ಮಿಕವಾಗಿ ಬ್ಯಾಂಕನ್ನು ವೇಳೆಗೆ ಸರಿಯಾಗಿ ತಲುಪುವ ತರಾತುರಿಯಲ್ಲಿ ಕಿರಣನ ಸ್ಕೂಟರಿನಲ್ಲಿ ಬಂದು ಬಿಟ್ಟಿದ್ದೆ. ಮೊದಮೊದಲು ನಮ್ಮಿಬ್ಬರ ಬಗ್ಗೆ ಗುಸುಗುಸು ಪಿಸುಪಿಸು ಎಂದು ಗಿಜಿಗಿಡುತ್ತಿದ್ದ ಸಹೋದ್ಯೋಗಿಗಳು ಬರುಬರುತ್ತಾ ಇಬ್ಬರಿಗೂ ಕೇಳುವ ಹಾಗೆ ಟೀಕಿಸಲು ಪ್ರಾರಂಭಿಸಿದ್ದರು. ಬ್ಯಾಂಕಿಗೆ ನಾನು ಒಂದು ನಿಮಿಷ ತಡವಾಗಿ ಹೋದರೂ ಸಾಕು, "ಯಾಕಪ್ಪಾ ಲೇಟು ಇವತ್ತು? ಮೊದ್ಲೇ ಗೊತ್ತಾಗಿದ್ದರೆ ನನ್ನ ಸ್ಕೂಟರನ್ನೇ ತರ್ತ್ತಿದ್ನಲ್ಲಪ್ಪಾ."

"ಛೆ! ಛೆ! ಎಂಥಾ ಛಾನ್ಸ್ ತಪ್ಪೋಯ್ತು."

ಅವರ ಮಾತು ಕೇಳುತ್ತಿದ್ದರೆ ನನಗೆ ಮೈಯೆಲ್ಲಾ ಉರಿದು ಹೋಗುತ್ತಿತ್ತು. ಕಿರಣ್ ರಜೆ ಹಾಕಿದರೆ ಸಾಕು, "ವಿರಹಾ...ನೂರು ನೂರು ತರಹಾ..." ಎಂದು ತಮ್ಮದೇ ಆದ ರಾಗದಲ್ಲಿ ಹಾಡುತ್ತಾ ಒಬ್ಬರ ಮುಖವನ್ನು ಒಬ್ಬರು ನೋಡಿಕೊಂಡು ಮುಸಿಮುಸಿ ನಗುವುದನ್ನು ಕಂಡು ನಾನು ಒಳಗೇ ಕುಗ್ಗಿ ಹೋಗುತ್ತಿದ್ದೆ. ಯಾವಾಗಲೂ ಹಾಸ್ಯ ಮಾಡುತ್ತಾ ನಗುತ್ತಲೇ ಇರುವ ಅವರು ನನ್ನ ಕಡೆ ನೋಡಿ ಮಾಮೂಲಾಗಿ ನಕ್ಕರೂ ಅದಕ್ಕೆ ನೂರು ಅರ್ಥಗಳು ಹುಟ್ಟಿಕೊಳ್ಳತೊಡಗಿದವು.

ದಿನ ಕಳೆದಂತೆ ಬ್ಯಾಂಕಿನಲ್ಲಿ ಕಿರಣ್ ಮತ್ತು ನನ್ನ ಬಗ್ಗೆ ಕಥೆಗಳೇ ಹುಟ್ಟಿಕೊಳ್ಳುತ್ತಿದ್ದರೂ ಕಿರಣ್ ಮಾತ್ರ ಯಾವುದಕ್ಕೂ ತಲೆಕೆಡಿಸಿಕೊಳ್ಳದೆ ಹಾಯಾಗಿದ್ದರು. 'ಅವರ ಹಾಗೆ ಇರಲು ನನ್ನ ಕೈಲಿ ಯಾಕೆ ಸಾಧ್ಯವಾಗುತ್ತಿಲ್ಲ?' ಎಂದು ನೂರಾರು ಬಾರಿ ನನಗನಿಸಿದ್ದೂ ಉಂಟು. ಸಹೋದ್ಯೋಗಿಗಳ ಚುಚ್ಚು ಮಾತುಗಳು ಅತಿಯಾಗಿ ಹೋದಾಗ ನನ್ನ ಮನಸ್ಸು ತೀವ್ರವಾದ ಉದ್ವೇಗಕ್ಕೆ ಒಳಗಾಗಿ ಬಿಟ್ಟಿತ್ತು. ಒಂದು ಮಧ್ಯಾಹ್ನ ಲಂಚ್ ಅವರ್‌ನಲ್ಲಿ ನಾನೇ ಕಿರಣ್ ಟೇಬಲ್ಲಿನ ಹತ್ತಿರ ಹೋಗಿ ಕುಳಿತೆ. ಇಷ್ಟು ದಿನ ಒಳಗೇ ಅನುಭವಿಸುತ್ತಿದ್ದ ನನ್ನ ನೋವು ಅಂದು ಮಾತುಗಳ ರೂಪ ಪಡೆದಿತ್ತು. ಎಲ್ಲವನ್ನೂ ಹೇಳಿ ಮುಗಿಸಿದ ಮೇಲೆ ನನ್ನ ಕಣ್ಣನ್ನು ತುಂಬಿ ಇನ್ನೇನು ಹೊರ ಚೆಲ್ಲಲಿದ್ದ ನನ್ನ ಕಣ್ಣೀರನ್ನು ಕಂಡು ಕಿರಣ್ ರೇಗಿಬಿಟ್ಟರು, "ಮೇಡಂ, ನಾನು ಏನು ಬೇಕಾದ್ರು ಸಹಿಸ್ತೀನಿ. ಆದರೆ ಈ ಹೆಂಗಸರ ಕಣ್ಣೀರನ್ನು ಕಂಡರೆ ಮಾತ್ರ ನನ್ನ ಕರುಣೆ ಹುಟ್ಟುವುದಿಲ್ಲ. 'ಅಯ್ಯೋ ಪಾಪ' ಅನ್ನಿಸುವುದಿಲ್ಲ. ಬದಲಾಗಿ ಅದನ್ನು ಕಂಡು ಕೆನ್ನೆಗೆ ನಾಲ್ಕು ಬಾರಿಸೋಣ ಅನ್ನಿಸುತ್ತೆ. ಸಮಸ್ಯೆಗಳೇನೇ ಬರಲಿ, ಅದಕ್ಕೆ ಪರಿಹಾರ ಹುಡುಕುವುದಕ್ಕೆ ಪ್ರಯತ್ನಿಸಬೇಕೇ ವಿನಃ ಹೀಗೆ ಅತ್ತರೆ ಏನು ಬರುತ್ತೆ? ಕಣ್ಣು ಕೆಂಪಗಾಗುತ್ತೆ ಅಷ್ಟೆ" ಕಿರಣರ ಈ ಅನಿರೀಕ್ಷಿತ ಮಾತುಗಳಿಂದ ನನ್ನ ಕಣ್ಣಂಚಿನಲ್ಲಿ ಇಣುಕಿದ ಕಣ್ಣೀರ ಹನಿ ಹಾಗೇ ಕಣ್ಣಿನಲ್ಲಿ ಇಂಗತೊಡಗಿತು.

"ನಾನೇನು ಕಿವುಡನಲ್ಲ ಮೇಡಂ, ನಾವಿಬ್ಬರೂ ಅಂದು ಸ್ಕೂಟರಿನಲ್ಲಿ ಬಂದಾಗಿನಿಂದ ಇಲ್ಲಿ ಎದ್ದ ಗಾಸಿಪ್‌ಗಳು, ಟೀಕೆಗಳೂ ನನ್ನ ಕಿವಿಗೂ ಬಿಳ್ತಾನೆ ಇವೆ. ಆದರೆ ನಾನದಕ್ಕೆಲ್ಲಾ ಕಿವಿಗೊಡ್ತಾನೇ ಇಲ್ಲ. ನಾವಿಬ್ಬರೂ ಮದುವೆ ಆದವರು. ಗಂಡ ಹೆಂಡತಿ ಮಕ್ಕಳು ಅಂತ ನಮ್ಮದೇ ಆದ ಬೆಚ್ಚನೆಯ ಕೋಟೆಯಲ್ಲಿ ಸಂತೋಷವಾಗಿರುವವರು. ನನಗೆ ನಿಮ್ಮ ಅಗತ್ಯವಾಗಲೀ, ನಿಮಗೆ ನನ್ನ ಅಗತ್ಯವಾಗಲೀ ಯಾವ ಕಾರಣಕ್ಕೂ ಖಂಡಿತಾ ಇಲ್ಲ. ಏನೋ ಆಕಸ್ಮಿಕವಾಗಿ ನೀವು ಅಂದು ದಾರಿಯಲ್ಲಿ ಸಿಕ್ಕಿರಿ. ನಾನು ನನ್ನ ಸ್ಕೂಟರಿನಲ್ಲಿ ಕರೆದುಕೊಂಡು ಬಂದೆ ಅಷ್ಟೆ. ನಾವು ಹಾಗೆ ಬಂದದ್ದು ನಾಲ್ಕು ಜನರ ಕಣ್ಣು ಕುಕ್ಕಿ ಅವರು ನಾಲ್ಕು ಮಾತನಾಡಿಕೊಂಡರೆ ನಾವು ತಲೆ ಕೆಡಿಸಿಕೊಳ್ಳಬೇಕಾದ ಅವಶ್ಯಕತೆಯೇ ಇಲ್ಲ. ನಾನು ಕೂಡ ಅಂದಿನಿಂದ ನಿಮ್ಮನ್ನು ಗಮನಿಸುತ್ತಿದ್ದೇನೆ. ಮುಖದ ಮೇಲೆ ಕಳೆಯಿಲ್ಲ. ಒಂದು ನಗುವಿಲ್ಲ. ತಲೆ ಮೇಲೆ ಆಕಾಶವೇ ಕಳಚಿಬಿದ್ದವರಂತೆ ಕುಳಿತಿರುತ್ತೀರಿ. ಯಾಕೆ ಹೀಗೆ ಮೇಡಂ, ನಿಮಗೊಂದು ಅಂತಃಪ್ರಜ್ಞೆಯಿಲ್ಲವೆ? ಆತ್ಮಸಾಕ್ಷಿಯಿಲ್ಲವೆ? ಮನುಷ್ಯ ಅಂಜಬೇಕಾಗಿರುವುದು, ಅಳುಕಬೇಕಾಗಿರುವುದು ತನ್ನ ಆತ್ಮಸಾಕ್ಷಿಗೆ ಪೆಟ್ಟುಬಿದ್ದಾಗ ಮಾತ್ರ! ನಾಯಿಗಳು ಬೊಗಳಿದರೆ ದೇವಲೋಕ ಹಾಳಾಗುವುದಿಲ್ಲ. ತಮ್ಮ ನಾಲಿಗೆಯ ತೀಟೆ ತೀರಿಸಿಕೊಳ್ಳಲು ಮಾತನಾಡುವ ಜನರ ಮಾತಿಗೆ ನಾವು ಮುದುಡಿಕೊಳ್ಳಬಾರದು. ಕುಗ್ಗಬಾರದು, ಬದಲಾಗಿ ಸೆಟೆದು ನಿಲ್ಲಬೇಕು. ನಮ್ಮ ಮನೋಸ್ಥೈರ್ಯ ಬಲಗೊಳ್ಳುತ್ತಾ ಹೋಗುವುದೂ ಕೂಡ ಇಂಥಹ ಹೊಡೆತಗಳಿಂದಲೇ. ಮನುಷ್ಯನ ನಿಜವಾದ ದುರಂತ ಪ್ರಾರಂಭವಾಗುವುದು ಅವನು ತನಗೆ ತಾನೇ ಆತ್ಮವಂಚನೆ ಮಾಡಿಕೊಳ್ಳತೊಡಗಿದಾಗ! ಈಗ ಉದ್ಭವಿಸಿರುವ ಪರಿಸ್ಥಿತಿಯಲ್ಲಿ ನಮ್ಮ ಆತ್ಮವಂಚನೆಯ ಪ್ರಶ್ನೆಯೇ ಏಳುವುದಿಲ್ಲ. ಹಾಗಿದ್ದ ಮೇಲೆ ನಾವು ಯಾರಿಗಾಗಿ ಯಾತಕ್ಕಾಗಿ ಹೆದರಬೇಕು ನೀವೇ ಹೇಳಿ. ಅವರ ಹುಚ್ಚು ಮಾತುಗಳಿಗೆ ನಾವು ತಲೆ ಕೆಡಿಸಿಕೊಳ್ಳಬಾರದು. ಒಮ್ಮೆ ಜೋರಾಗಿ ನಕ್ಕು ಬಿಡಬೇಕು. ಅವರ ಮೂರ್ಖತೆಯನ್ನು ಕಂಡು ನಗ್ತಾನೇ ಇರಬೇಕು." ಎಂದು ಕಿರಣ್ ಜೋರಾಗಿ ನಗ ತೊಡಗಿದಾಗ ಇಷ್ಟು ದಿನವೂ ನನ್ನ ತಲೆಯನ್ನು ಕೊರೆಯುತ್ತಿದ್ದ ಕೀಟಗಳನ್ನೆಲ್ಲಾ ಒಮ್ಮೆ ಕೊಡವಿ, ನಾನೂ ಅವರೊಂದಿಗೆ ನಗತೊಡಗಿದೆ. ●

# ಕಾರ್ಕಳದಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭ

ಪ್ರಶಸ್ತಿ ಪ್ರದಾನ ಸಮಾರಂಭ. ಶ್ರೀ ಎನ್. ಗುರುರಾಜ್ ಅವರ ಭಾಷಣ.








ಕವಯಿತ್ರಿಯರ ಗೋಷ್ಠಿ. ಡಾ. ನಾ. ಮೊಗಸಾಲೆ ಅವರ ಭಾಷಣ.

ಶ್ರೀ ಗುರುರಾಜರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವ ಶ್ರೀಮತಿ ಎಚ್. ಶಕುಂತಲಾ ಭಟ್ (ಎಡ), ಡಿ. ಬಿ. ರಜಿಯಾ.

'ಕರಾವಳಿ' ಲೇಖಕಿಯರ ವಾಚಕಿಯರ ಸಂಘ ದಕ್ಷಿಣ ಕನ್ನಡ ಹಾಗೂ ಕಾಸರಗೋಡು ಇವರು ನಡೆಸುವ ದಿ. ಯು. ಕೃಷ್ಣಾಬಾಯಿ ದತ್ತಿನಿಧಿ ರಾಜ್ಯಮಟ್ಟದ ಎರಡನೆಯ ವರ್ಷದ ಕಾವ್ಯ ಪ್ರಶಸ್ತಿ ಪ್ರದಾನ ಸಮಾರಂಭವು ಇತ್ತೀಚೆಗೆ ಕಾರ್ಕಳದ ಸರಕಾರಿ ಪದವಿಪೂರ್ವ ಕಾಲೇಜಿನಲ್ಲಿ ನಡೆಯಿತು.

ಪ್ರಶಸ್ತಿಗಳನ್ನು ವಿತರಿಸಿ, ಅಧ್ಯಕ್ಷ ಸ್ಥಾನದಿಂದ ಮಾತನಾಡಿದ 'ಉದಯವಾಣಿ', ದೈನಿಕದ ವಾರ್ತಾ ಸಂಪಾದಕ ಶ್ರೀ ಎನ್. ಗುರುರಾಜ್ ಅವರು "ಸಮರ್ಥ ಕಾವ್ಯಗಳನ್ನು ಪ್ರಯತ್ನದ ಮೂಲಕ ಕೊಡಬಲ್ಲ ಕವಿಹೃದಯ ಎಲ್ಲರಲ್ಲಿಯೂ ಇದೆ" ಎಂದರು. ಲೇಖಕಿಯರನ್ನು ಬೆಳಕಿಗೆ ತರುವ ಸಂಸ್ಥೆಯ ಗುರುತರ ಹೊಣೆಯನ್ನು ಸೂಚ್ಯವಾಗಿ ತಿಳಿಸಿದ ಅವರು 'ಕರಾವಳಿ' ಸಂಸ್ಥೆಗೆ ದತ್ತಿನಿಧಿ ಸಿಕ್ಕಿರುವುದು ಸಕಾಲಿಕವೆಂದರು.

ಶ್ರೀಮತಿ ಡಿ. ಬಿ. ರಜಿಯಾ ಅವರ ಕವನ ಸಂಕಲನ 'ಛಾಯೆ' ಪ್ರಥಮ ಪುರಸ್ಕಾರ ರೂ. 500 ಗೆದ್ದುಕೊಂಡಿದೆ. ಶ್ರೀಮತಿ ಎಚ್. ಶಕುಂತಲಾ ಭಟ್ ಅವರ ಕಾವ್ಯಸಂಕಲನ 'ಅತಿಥಿ' ದ್ವಿತೀಯ ಪ್ರಶಸ್ತಿ ರೂ. 300 ಪಡೆದಿದೆ. ತೃತೀಯ ಬಹುಮಾನಕ್ಕೆ ಅರ್ಹ ಕೃತಿಗಳು ಬರಲಿಲ್ಲ.

ಮುಖ್ಯ ಅತಿಥಿಗಳಾಗಿದ್ದ ಕಾರ್ಕಳ ಭುವನೇಂದ್ರ ಕಾಲೇಜಿನ ಕನ್ನಡ ಪ್ರಾಧ್ಯಾಪಕ ಶ್ರೀ ಎನ್. ಕೆ. ಚೆನ್ನಕೇಶವ ಅವರು, "ಜೀವಾನುಭವವನ್ನು ದಾಖಲಿಸಿದಾಗ ಕವನವಾಗುತ್ತದೆ" ಎಂದರು. ಬಜಗೋಳಿ ಸಿಂಡಿಕೇಟ್ ಬ್ಯಾಂಕಿನ ಮೇನೇಜರ್ ಶ್ರೀ ರವಿಶಂಕರ ಅತ್ತಾವರ ಅವರು "ಕವಿಗಳು ಬದುಕನ್ನು ಅಭ್ಯಸಿಸದಿದ್ದರೆ ಕವಿಯಾಗುವುದಿಲ್ಲ" ಎಂದರು. ದಿ. ಯು. ಕೃಷ್ಣಾಬಾಯಿ ಅವರ ಪತಿ ಶ್ರೀ ಕೆ. ಸಂಜೀವರಾವ್ ಇನ್ನೋರ್ವ ಮುಖ್ಯ ಅತಿಥಿಗಳಾಗಿದ್ದರು.

ಪ್ರಶಸ್ತಿಗೆ ಕೃತಜ್ಞತೆ ಸಲ್ಲಿಸಿದ ಶ್ರೀಮತಿ ಡಿ. ಬಿ. ರಜಿಯಾ, "ಸಾಹಿತ್ಯ ಪರಿಸರ ಹಾಗೂ ಸಮರ್ಥ ಮಾರ್ಗದರ್ಶನದಿಂದ ಬರೆಯುವ ಅಭಿರುಚಿ ಹುಟ್ಟಿತು" ಎಂದರು.

"ಗೃಹಿಣಿಯಾಗಿ, ತನಗಿರುವ ಸೀಮಿತ ಚೌಕಟ್ಟಿನಲ್ಲಿ ಮಾಡಿದ ಪ್ರಯತ್ನಕ್ಕೆ ದೊರೆತ ಅನಿರೀಕ್ಷಿತ ಪ್ರೋತ್ಸಾಹ" ಎಂದು ಶ್ರೀಮತಿ ಎಚ್. ಶಕುಂತಲಾ ಭಟ್ ಹೇಳಿದರು.

'ರಿಜಿಸ್ಟರ್ಡ್ ಆಗಿರುವ 'ಕರಾವಳಿ' ಸಂಘದ ಕಟ್ಟಡಕ್ಕೆ ಸೂಕ್ತ ನಿವೇಶನವನ್ನು ಹುಡುಕುತ್ತಿರುವುದಾಗಿ' ಸಂಘದ ಅಧ್ಯಕ್ಷೆ ಶ್ರೀಮತಿ ಸಾರಾ ಅಬೂಬಕರ್ ಪ್ರಾಸ್ತಾವಿಕ ಭಾಷಣದಲ್ಲಿ ಹೇಳಿದರು.

ಕು. ಮನೋರಮಾ ರೈ ಪ್ರಶಸ್ತಿಯ ಹಿನ್ನಲೆ ವಿವರಿಸಿದರು. "ಶೃಂಗೇರಿಯ ಶ್ರೀಮತಿ ಶೋಭಾ ಅನಂತ್, ತನ್ನ ತಾಯಿ ಯು. ಕೃಷ್ಣಾಬಾಯಿ ಅವರ ಹೆಸರಿನಲ್ಲಿ ಹತ್ತು ಸಾವಿರ ರೂಪಾಯಿಗಳ ನಿಧಿಯನ್ನು 'ಕರಾವಳಿ'ಗೆ ದಾನವಾಗಿ ಕೊಟ್ಟಿದ್ದಾರೆ." ಎಂದರು.

ಶ್ರೀಮತಿ ಸೆವೆರಿನ್ ಡಿ'ಸೋಜಾ ಸ್ವಾಗತಿಸಿದರು. ಕಾರ್ಕಳ ಪ್ರತಿನಿಧಿ ಶ್ರೀಮತಿ ಶ್ಯಾಮಲಾ-ಗೋಪೀನಾಥ್ ಕಾರ್ಯಕ್ರಮ ನಿರ್ವಹಿಸಿದರು. ಕಾರ್ಯದರ್ಶಿ ಶ್ರೀಮತಿ ಮೋಹಿನೀ ಮಂಜುನಾಥ್ ವಂದಿಸಿದರು.

## ಕವಯಿತ್ರಿಯರ ಗೋಷ್ಠಿ

ಇದಕ್ಕೆ ಮೊದಲು ಕವಯಿತ್ರಿಯರ ಗೋಷ್ಠಿ ನಡೆಯಿತು. ಕವಿ ಡಾ. ನಾ. ಮೊಗಸಾಲೆ ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿಯರಾದ ಡಿ. ಬಿ. ರಜಿಯಾ, ಎಚ್. ಶಕುಂತಲಾಭಟ್, ಸುಶೀಲಾ ಆರ್ ರಾವ್, ರಮಾ ಕಾರಂತ, ಅನುಪಮಾ ಚಿಪ್ಳೂಣಕರ, ವನಜಾ ವಿ. ರಾವ್, ಸಾವಿತ್ರೀ ಮನೋಹರ್, ಗಾಯತ್ರೀ ಉಡುಪ, ನಿರ್ಮಲಾ ನೂರಾಲ್-ಬೆಟ್ಟು, ಪ್ರಫುಲ್ಲಾ ಪೈ, ಮಂಗಳಾ ಡೋಂಗ್ರೆ ಸ್ವರಚಿತ. ಕವನ ವಾಚಿಸಿದರು.

ಒಳ್ಳೆಯ, ಕೆಟ್ಟ ಕವನಗಳ ವಿಮರ್ಶೆ ಸಾಧ್ಯವಿಲ್ಲ ಎಂದರು ಮೊಗಸಾಲೆ. ನವ್ಯ, ನವೋದಯ, ಬಂಡಾಯ ಕಾವ್ಯ ಪರಂಪರೆಯ ಹಳೆಯ ಉದಾಹರಣೆಗಳನ್ನ ಕೊಟ್ಟರು. ಭಾಷಣವನ್ನು ತನ್ನ ಪತ್ನಿಯ ಕುರಿತ ಉಲ್ಲೇಖ, ಪ್ರಶಂಸೆಗಳಿಗೆ ಮಿತಿಗೊಳಿಸಿ, ಗೋಷ್ಠಿಯನ್ನು ಲಘುವಾಗಿ ಪರಿಗಣಿಸಿದರೆಂದು ಹಲವು ಶ್ರೋತೃಗಳು ಖಾರವಾಗಿ ಹೇಳುವುದು ಕೇಳಿಸಿತು. ಮಹಿಳೆಯರ ಸಾಹಿತ್ಯ ಚಟುವಟಿಕೆಗಳನ್ನು ಪುರುಷರು ಗಂಭೀರವಾಗಿ ಇನ್ನೂ ಪರಿಗಣಿಸುತ್ತಿಲ್ಲ ಎನ್ನುವುದನ್ನು ಮೊಗಸಾಲೆಯವರು ಸಾಂಕೇತಿಕವಾಗಿ ತೋರಿಸಿಕೊಟ್ಟಂತಾಯಿತು.

ಶ್ರೀಮತಿ ರಾಧಾಭಟ್ ಅವರಿಂದ ಸ್ವಾಗತ. ಕು. ಯು. ಬಿ. ರಾಜಲಕ್ಷ್ಮೀ ಅವರಿಂದ ವಂದನಾರ್ಪಣೆ. ಶ್ರೀಮತಿ ಎನ್ ಗೀತಾ ಕಾರ್ಯಕ್ರಮ ನಿರ್ವಹಿಸಿದರು. ಸಂಘದ ಅಧ್ಯಕ್ಷೆ ಸಾರಾ ಅಬೂಬಕರ್ ಗೋಷ್ಠಿಯಲ್ಲಿ ಉಪಸ್ಥಿತರಿದ್ದರು.

— ಯು. ಬಿ. ರಾಜಲಕ್ಷ್ಮಿ

# ವಜ್ರಮಹೋತ್ಸವದ ಸಂಭ್ರಮದಲ್ಲಿ ಕುಮಟಾದ ಶ್ರೀ ಮಹಾಲಸಾ ನಾರಾಯಣಿ ದೇವಾಲಯ



—ಶ್ರೀಮತಿ ಸುಮಿತ್ರಾ ಶಾನಭಾಗ

ಕುಮಟಾ ಊರು ಹಲವು ದೇವಾಲಯಗಳಿಂದ ಆಕರ್ಷಣೀಯವಾಗಿ ಇರುವ ತಾಣ. ಹೊರ ವಲಯದಲ್ಲಿ ಧಾರ್ಮಿಕ ಮತ್ತು ಐತಿಹಾಸಿಕವಾಗಿ ಪ್ರಸಿದ್ಧವಾದ ಶ್ರೀ ಕ್ಷೇತ್ರ ಗೋಕರ್ಣ, ಯಾಣ, ಧಾರೇಶ್ವರ ಮುಂತಾದವುಗಳಿದ್ದರೆ ಕುಮಟಾ ಪೇಟೆಯಲ್ಲಿ ಶ್ರೀ ಮಹಾಲಸಾ ನಾರಾಯಣಿ, ಚಿತ್ರಗಿ ಮಠ, ಶ್ರೀ ಶಾಂತೇರಿ ಕಾಮಾಕ್ಷಿ, ರಾಮನಾಥ ಲಕ್ಷ್ಮೀನಾರಾಯಣ, ರಾಮೇಶ್ವರ, ಕಾವೂರ, ಕಾಮಾಕ್ಷಿ, ಕಾಳಭೈರವ, ಶ್ರೀ ವೆಂಕಟರಮಣ, ಕುಂಭೇಶ್ವರ, ಶಾಂತಿಕಾ, ಪರಮೇಶ್ವರಿ ಈ ಮೊದಲಾದ ದೇವಾಲಯಗಳಲ್ಲದೇ ಪಾರ್ಶ್ವನಾಥ ದೇವ ಮುಂತಾದ ಬಸದಿಗಳಿದ್ದು ತುಂಬ ಆಕರ್ಷಕವಾಗಿದೆ.



ದೇವಾಲಯದ ಒಳಗೆ ಕಟ್ಟಿಗೆಯ ಕಲಾಕುಸುರಿಯ 'ನವರಂಗ

ಶ್ರೀ ಮಹಾಲಸಾ ನಾರಾಯಣಿ ದೇವಾಲಯವು ಮೂಲತಃ ಗೋವಾದಲ್ಲಿದ್ದು ಅಲ್ಲಿಂದ ಬಂದ ಗೌಡ ಸಾರಸ್ವತ ಬ್ರಾಹ್ಮಣರು 1565 ರ ಸುಮಾರಿಗೆ ಕುಮಟಾದಲ್ಲಿ ಸ್ಥಾಪಿಸಿದರೆಂದು ಐತಿಹ್ಯ.

ಶ್ರೀ ದೇವಿಯು ಸಾಕ್ಷಾತ್ ವಿಷ್ಣು ಪರಮಾತ್ಮನ ಅಂಶವೇ ಎಂದು ಶ್ರೀಮದ್ ಭಾಗವತ ಪುರಾಣದಲ್ಲಿ ವರ್ಣಿಸಿದೆ. ಸಮುದ್ರ ಮಥನದಲ್ಲಿ ಉದ್ಭವಿಸಿದ ಅಮೃತ ಕಲಶವನ್ನು ಸ್ವೀಕರಿಸಿ, ದೇವತೆಗಳಿಗೆ ಅಮೃತವನ್ನು ಹಂಚಿದ ಶ್ರೀ ಮಹಾವಿಷ್ಣುವಿನ ಮೋಹಿನಿ ರೂಪವೇ ಶ್ರೀ ಮಾತೆ ಮಹಾಲಸಾ ನಾರಾಯಣಿ ದೇವಿ. ಇಂಥ ಅಪ್ರತಿಮ ಶಕ್ತಿವಂತೆ ಶ್ರೀ ಮಹಾಲಸೆಯು ಗುಡಿಗಾರರು, ದೈವಜ್ಞ ಬ್ರಾಹ್ಮಣ ಹಾಗೂ ವೈಶ್ಯರಿಗೂ ಕುಲದೇವತೆಯಾಗಿದ್ದಾರೆ.

ಶ್ರೀ ಮಹಾಲಸಾದೇವಿ ಚತುರ್ಭುಜಳು. ಬಲಗಡೆಯ ಮೇಲಿನ ಕೈಯಲ್ಲಿ ತ್ರಿಶೂಲ ಹಾಗೂ ಕೆಳಗೈಯಲ್ಲಿ ಖಡ್ಗ ಮತ್ತು ಮುಂಡಾಸುರನ ಶಿಖೆ, ಎಡಭಾಗದ ಮೇಲಿನ ಕರದಲ್ಲಿ ಅಮೃತಕಲಶ ಹಾಗೂ ಕೆಳ ಮುಷ್ಟಿಯಲ್ಲಿ ರಾಹುದೈತ್ಯನ ಶಿರವೂ ಇದ್ದು ಅದರ ಕೆಳಗೆ ರಕ್ತವನ್ನು ಹೀರುತ್ತಿರುವ ತೋಳವಿದೆ. ಪಾದಗಳೆರಡೂ ಚಂಡಾಸುರನನ್ನು ಮೆಟ್ಟಿವೆ. ಶ್ರೀ ಮಾತೆಯು ಆಯಾ ಪರ್ವಕಾಲಗಳ ಮುಖ್ಯ ಅಧಿದೇವತೆಗಳ ರೂಪದಲ್ಲಿ ಸ್ತ್ರೀರೂಪ ಅಥವಾ ಪುರುಷರೂಪ ಎರಡರಲ್ಲೂ ಅಲಂಕರಿಸಲ್ಪಡುತ್ತಾಳೆ. ಈ ದೇವಿಗೆ ಮೂರು ಕಳೆಗಳಿವೆ ಎಂದು ಪ್ರಸಿದ್ಧಿ ಇದೆ. ಮುಂಜಾನೆ ನಿರ್ಮಾಲ್ಯ ತೆಗೆದ ಬಳಿಕ ಪುಟ್ಟ ಬಾಲಿಕೆಯಂತೆಯೂ, ಹೊತ್ತೇರಿದಂತೆ–ಮಹಾಭಿಷೇಕವಾದ ನಂತರ ನವತರುಣಿಯಂತೆಯೂ ಸೂರ್ಯಾಸ್ತ ಸಮಯದಲ್ಲಿ ಮುತ್ತೈದೆಯಾಗಿ ಕಾಣುತ್ತಾಳೆ.



ಗುಡಿಗಾರ ಚಂದ್ರ ಅನಂತ ಶೆಟರು ಕಾವಿಕಲೆಗೆ ಜೀವಕಳೆ ನೀಡಿದ ಚಿತ್ರ. ನಕುಲ ಮತ್ತು ಸಹದೇವ



ಸೂರ್ಯಮಂಡಲ

ಈ ದೇವಾಲಯವು ಅದರ ಅದ್ಭುತವೂ, ಸುಂದರವೂ ಆದ ಕಲಾತ್ಮಕತೆಗಾಗಿ ಪ್ರಸಿದ್ಧವಾಗಿದೆ. ಇಲ್ಲಿಯ ಗುಡಿಗಾರರಿಂದ ಕೆತ್ತಲ್ಪಟ್ಟ ಭಾವನೆಯು ಅತ್ಯಾಕರ್ಷಕವಾಗಿದೆ. ದೇವಾಲಯದ ಗೋಡೆಗಳ ಮೇಲೆ ಕೊರೆದ ಕಾವೀಕಲೆ ಅತೀ ಸುಂದರ. ದಶಾವತಾರ, ಮಹಾಭಾರತ, ಸೂರ್ಯಮಂಡಲ, ಚಂದ್ರಮಂಡಲಗಳಾದಿ ದೃಶ್ಯಗಳು ಕಲಾರಸಿಕರಿಂದ ಪ್ರಶಂಸಿಸಲ್ಪಟ್ಟಿವೆಯಲ್ಲದೇ ದೇಶದಲ್ಲಿಯೇ ಹೆಚ್ಚಿನ ಮನ್ನಣೆಯನ್ನು ಪಡೆದಿವೆ.

ಶ್ರೀ ಮಹಾಲಸಾ ದೇವಿಗೆ ಕರಂಬಿರ (ದಾರೆಹುಳಿ) ಗಿಡದ ಚಿಗುರೆಲೆಗಳಿಂದ ತಿಳಿಜಾವದಲ್ಲಿ ಶ್ರೀ ದೇವಿಯ ವಿಗ್ರಹದ ನಾನಾ ಭಾಗಗಳಿಗೆ ನೀರಿನಿಂದ ಅಂಟಿಸಿ, ನಂತರ ಅವಶ್ಯವಿರುವ ಪ್ರಶ್ನೆಗಳನ್ನು ಶ್ರೀದೇವಿಯ ಮುಂದೆ ತೋಡಿ-ಕೊಳ್ಳಲಾಗುವದು. ಅಲ್ಪ ಸಮಯದಲ್ಲೇ ಉತ್ತರ

ಶಾರದಾ ನವರಾತ್ರಿ ಉತ್ಸವದ ಹುಣ್ಣಿಮೆ ದಿನ ಶ್ರೀ ಮಹಾಲಸಾದೇವಿಯ ಮೋಹಿನಿ ಅವತಾರ



ಗರ್ಭಗುಡಿಯಲ್ಲಿರುವ ದೇವತಾ ವಿಗ್ರಹಗಳು –ಮಹಾಲಸಾ ನಾರಾಯಣಿ ಮತ್ತು ಇತರ ವಿಗ್ರಹಗಳು





ಜೀರ್ಣೋದ್ಧಾರದ ನಂತರ ದೇವಾಲಯದ ಮುಂಭಾಗದ ನೋಟ

ದೇವಾಲಯದ ಹೊರಗೋಡೆಗಳ ಕಲಾತ್ಮಕ ಭಿತ್ತಿ ಚಿತ್ರಗಳು



ಕೊಳ್ಳಲಾಗುವುದು. ಅಲ್ಪ ಸಮಯದಲ್ಲೇ ಉತ್ತರ ರೂಪದಲ್ಲಿ ಸಂಬಂಧಪಟ್ಟ ಚಿಗುರೆಲೆಗಳು ಪಟಪಟ ಬೀಳಲಾರಂಭಿಸುತ್ತವೆ. ಇಲ್ಲವೇ ವಿಗ್ರಹದ ಮೇಲೆ ಚಲಿಸಲಾರಂಭಿಸುತ್ತವೆ. ಇಂಥವಕ್ಕೆಲ್ಲ ವಿಶೇಷ ಅರ್ಥಗಳಿದ್ದು ಭಕ್ತಾದಿಗಳು ಅವನ್ನು ಅರ್ಚಕರಿಂದ ತಿಳಿದು ಶ್ರೀ ದೇವಿಯು ಸೂಚಿಸಿದ ಪ್ರಕಾರ ನಡೆದುಕೊಳ್ಳುವರು.

ಈ ಪೂರ್ವದಲ್ಲಿ ಶ್ರೀ ದೇವಿಯ ಪ್ರತಿಷ್ಠೆಯು ಸನ್ 1932 ನೇ ಇಸ್ವಿಯ ಚೈತ್ರ ಶುದ್ಧ ಪಂಚಮಿಯ ಮುಹೂರ್ತದಲ್ಲಿ ಜರುಗಿತ್ತು. ಈಗ ಅಖಂಡ 60 ಸಂವತ್ಸರಗಳ ನಂತರ ಅಂದರೆ 8–4–1992 ನೇ ಬುಧವಾರ ಬೆಳಿಗ್ಗೆ 9-35 ಕ್ಕೆ ಶ್ರೀಮದ್ ವಿದ್ಯಾಧಿರಾಜ ತೀರ್ಥ ಶ್ರೀಪಾದ ವಡೇರ ಸ್ವಾಮೀಜಿಯವರಿಂದ ಪುನರ್‌ಪ್ರತಿಷ್ಠೆಯಾಗಲಿದೆ. ಈ ಕಾರ್ಯಕ್ರಮಕ್ಕೆ ಸುಮಾರು ಮೂರು ಲಕ್ಷ ರೂಪಾಯಿ ಖರ್ಚು ತಗುಲಬಹುದೆಂಬ ಅಂದಾಜಿದೆ. ಈ ಸಂದರ್ಭದಲ್ಲಿ 'ಸಹಸ್ರ ಕಲಶಾಭಿಷೇಕ' ವನ್ನು ನಡೆಸುವ ಕಾರ್ಯಕ್ರಮ ಇಟ್ಟುಕೊಳ್ಳಲಾಗಿದೆ. ಒಂದು ಕಲಶಕ್ಕೆ ಒಂದು ನೂರಾ ಒಂದು ರೂಪಾಯಿ ಕಳಿಸಿ ಭಕ್ತರು ಸಹಕರಿಸಬೇಕೆಂದು ಆಡಳಿತ ಮಂಡಳಿಯವರು ವಿನಂತಿಸುತ್ತಾರೆ.

*****

ಮಿನಿಕಥೆ

# ಭಾರ್ಯಾ ರೂಪವತೀ...

– ಗೀತಾ ಶ್ರೀಕಾಂತ್



'ಸಾಹೇಬ್ರು ಕರೀತಾರೆ' ಅಂತ ಜವಾನ ಬಂದು ಹೇಳಿದಾಗ ಪ್ರಸಾದ್ ಲೆಕ್ಕದ ಪುಸ್ತಕದಿಂದ ತಲೆಯೆತ್ತಿದ. ಯಾಕೆ ಕರೀತಾರೋ ಅಂತ ಬಿಗಿಲಾಯ್ತು. ಸಾಮಾನ್ಯ ನೌಕರರನ್ನು ಕಂಪನಿಯ ಎಂ. ಡಿ. ಕರಿಯೋದೆಂದ್ರೆ ಸ್ವಲ್ಪ ಆಶ್ಚರ್ಯವೇ ! ಆದ್ರೂ ಮೊನ್ನೆ ತಾನೇ ಆಡಳಿತ ವಹಿಸಿಕೊಂಡ ಈ ಎಂ. ಡಿ. ತನಗಿಂತ ಕಾಲೇಜಿನಲ್ಲಿ ಎರಡು ವರ್ಷ ಮುಂದಿರಲಿಲ್ಲವೇ ? ಆ ಪರಿಚಯದಿಂದ ಕರೆದಿರಬಹುದು. ಆದರೂ ತನ್ನನ್ನು ಯಾಕೆ ಕರೆದರೆಂದು ಹೊಳೆಯಲಿಲ್ಲ. ತಾನೇ ತಿಳಿಯುತ್ತೆ ಎಂದು ಕ್ಯಾಬಿನ್ ಹೊಕ್ಕ.

ಆದರದಿಂದ ಕರೆದು ಕೂಡ್ರಿಸಿದ ಎಮ್‌ಡಿ—ಆನಂದ್—ಈತನನ್ನು ಉದ್ದೇಶಿಸಿ "ಪ್ರಸಾದ್ ಒಂದು ಮಾತು. ನಾನು ಸುತ್ತಿ ಬಳಸಿ ಮಾತನಾಡೋಲ್ಲ. ಏನಿದ್ರೂ ನೇರವಾಗಿ ಹೇಳೋನು. ನಿಮಗೆ ನಮ್ಮ ಕಂಪನಿಯ ಮೈಸೂರು ಬ್ರ್ಯಾಂಚಿಗೆ ಮ್ಯಾನೇಜರ್ ಅಂತ ಕಳಿಸ್ತಾ ಇದ್ದೇನೆ. ಕಾರು, ಫೋನು, ಬಂಗ್ಲೆ-ಮತ್ತೂ ಏನೇನು ಸೌಕರ್ಯಗಳು ಬೇಕೋ-ಎಲ್ಲ ಕೊಡಬಲ್ಲೆ. ಅದಕ್ಕೆ ಪ್ರತಿಯಾಗಿ ನೀವು ನನಗೊಂದು ವಸ್ತುವನ್ನು ಕೊಡಬೇಕು" ಎಂದ.

ಈತ ಮಧ್ಯಮವರ್ಗದ ಕುಟುಂಬದಿಂದ ಬಂದವ. ಆದರೆ ಕನಸುಗಳು, ಆಸೆಗಳು ನೂರಾರು. ಮೇಲಾಗಿ ಮಹತ್ವಾಕಾಂಕ್ಷೆ. ಇಂಥ ಅವಕಾಶಕ್ಕಾಗಿ ಎದುರು ನೋಡುತ್ತಿದ್ದ. ಅದು ತಾನಾಗೇ ಒದಗಿದೆ. ಆದರೆ ಅದಕ್ಕೆ ಪ್ರತಿಯಾಗಿ ತಾನು ಈ ಶ್ರೀಮಂತನಿಗೆ ಏನು ಕೊಡಬಲ್ಲೆ ?— ಅಂತ ಯೋಚಿಸುತ್ತಿದ್ದ.

'ಯಾಕೆ ಪ್ರಸಾದ್, ಏನೂಂತ ಕೇಳೋದಿಲ್ಲವೇ ? "

"ಹಾಂ ! ಸರ್. ನಾನು ಬಡವ-ನಿಮಗೇನು ತಾನೇ ಕೊಡಬಲ್ಲೆ ? ಚೆನ್ನಾಗಿ ಕೆಲಸ ಮಾಡುವ ಭರವಸೆ ಮತ್ತು ಕೃತಜ್ಞತೆ ಮಾತ್ರ ಕೊಡಬಲ್ಲೆ ಸರ್" ಎಂದಿದ್ದಕ್ಕೆ ಆನಂದ್ "ಪ್ರಸಾದ್ ನಿಮ್ಮ ಹತ್ತಿರ ಇರುವ ಅಪೂರ್ವ ಸೌಂದರ್ಯದ ಖಣಿ, ನಿಮ್ಮ ಪತ್ನಿಯನ್ನು ನನಗೆ ಬಿಟ್ಟು ಹೋಗಿ. ಅದೇ ನಾನು ಕೇಳೋದು "—ಎಂದ. ಪ್ರಸಾದ್‌ಗೆ ಆಘಾತವೇ ಆಯ್ತು. ಏನೂ ಹೊಳೆಯಲೇ ಇಲ್ಲ.

ಕಣ್ಣು ಕೋರೈಸುವ ಸೌಂದರ್ಯ ಹೊಂದಿರುವ ತನ್ನ ಪ್ರಿಯ ಪತ್ನಿಯನ್ನು ಈತ ಇಷ್ಟು ಸುಲಭವಾಗಿ ಕೇಳುತ್ತಿರುವನಲ್ಲಾ ಅಂತ ರೋಷ ಉಕ್ಕಿತು. ಆದರೆ ಮಾಲೀಕನೆದುರು ಅಸಹಾಯನಾಗಿ ನಿಂತಿದ್ದ.

ಮತ್ತೆ ಆನಂದ್‌ನೇ "ನೋಡಿ ಪ್ರಸಾದ್, ನನಗೇನು ಬೇಕೆಂಬುದನ್ನು ನಾನು ಹೇಳಿದ್ದೇನೆ. ನೀವು ಸಮ್ಮತಿಸಿ, ವಿಚ್ಛೇದನ ಪಡೆದು, ಅವರನ್ನು ನನ್ನ ಪತ್ನಿಯಾಗಲು ಬಿಟ್ಟುಕೊಡಬೇಕು. ನೀವೇ ನಿರ್ಧಾರ ತೆಗೆದುಕೊಂಡರೆ ಸರಿ. ಇಲ್ಲವಾದಲ್ಲಿ ನನ್ನ ಹಟ ನಿಮಗೆ ಮೊದಲಿನಿಂದಲೂ ಗೊತ್ತಿದೆ. ನನಗೆ ಬೇಕಾದ್ದನ್ನು ನಾನು ಪಡೆಯಬಲ್ಲೆ. ನೀವೂ ಯೋಚಿಸಿ. ಕೆಟ್ಟದ್ದನ್ನು ಎದುರಿಸುವುದಕ್ಕಿಂತ-ದಾರಿ ಬಿಟ್ಟು ದೂರ ಸರಿದು-ಚೆನ್ನಾಗಿರುವುದು ಒಳ್ಳೆಯದು. ನೀವಿನ್ನು ಹೋಗಬಹುದು. ಎರಡು ದಿನ ಬಿಟ್ಟು ನಿಮ್ಮನ್ನು ಕರೆಯುತ್ತೇನೆ" ಎಂದ.

ಪ್ರಸಾದ್ ತನ್ನ ಜಾಗಕ್ಕೆ ಹೇಗೆ ಬಂದನೋ, ಮನೆ ಹೇಗೆ ಮುಟ್ಟಿದನೋ ಒಂದೂ ತಿಳಿಯಲಿಲ್ಲ. ಒಂದೇ ದಿನದಲ್ಲಿ ಜರ್ಜರಿತನಾದ. ಮನೆಯ ಜವಾಬ್ದಾರಿ, ತಂಗಿಯರ ಓದು, ಮದುವೆ, ತಮ್ಮಂ

ದಿರ ಜೀವನ ರೂಪಿಸುವುದು-ಇದನ್ನೆಲ್ಲ ಹೇಗೆ ನಿರ್ವಹಿಸುವುದು ? ಈ ಬಾಸ್ ಅಂತೂ-ತನ್ನನ್ನು ಕೊಂದರೂ ಸರಿಯೇ—ವಿಧವೆಯಾದ ತನ್ನ ಹೆಂಡತಿಯನ್ನು ಮತ್ತೆ ಮದುವೆಯಾಗುವನೇ ! ಆದರೆ ನನ್ನ ತಾಯಿ, ತಂಗಿ, ತಮ್ಮಂದಿರು ಬೀದಿ ಪಾಲಾಗ್ತಾರೆ. ಏನು ಮಾಡೋದು ?—ಎಂದು ಯೋಚಿಸಿ ಕೊನೆಗೆ ತಾನೇ ಬಾಸ್ ಹತ್ತಿರ ಹೋದ.

"ಸರ್, ನಾನು ನಿರ್ಧಾರ ತೆಗೆದುಕೊಂಡಿದ್ದೇನೆ-ನಿಮಗೆ ಅನುಕೂಲವಾಗುವಂಥದ್ದು. ಆದರೆ-ನಿಮ್ಮ ಬಯಕೆಯನ್ನು-ನನ್ನ ಪತ್ನಿಗೆ- ನೀವೇ ತಿಳಿಸಿ-ಅವಳು ಒಪ್ಪಿದರೆ-ನಾನು ಮೈಸೂರಿಗೆ ಹೋಗುವುದು ಖಚಿತ "—ಎಂದು ಹೇಳಿದ.

ಇದನ್ನು ಕೇಳಿದ ಆನಂದ್ ಉತ್ಸಾಹದಿಂದ ಮೇಲೆದ್ದು. "ಥ್ಯಾಂಕ್ಸ್. ಅದರ ಅವಶ್ಯಕತೆ ಇಲ್ಲ. ಏಕೆಂದರೆ-ಅವರಿಗೆ ಮೊದಲೇ ನನ್ನ ಮೇಲೆ ಇಷ್ಟ ಇದೆ. ಆದರೆ ನಾನು ಎರಡು ವರ್ಷ ಫಾರಿನ್ನಿಗೆ ಹೋದಾಗ ಅವರ ಮದುವೆ-ಅನಿರೀಕ್ಷಿತವಾಗಿ ನಿಮ್ಮ ಜೊತೆ ನಡೆದಿದೆ. ನಾನು ಅವರನ್ನು ನಿಮಗಿಂತಲೂ ಚೆನ್ನಾಗಿ ನೋಡಿಕೊಳ್ಳಬಲ್ಲೆ. ನಿಮ್ಮ ತಮ್ಮ ತಂಗಿಯರ ಸಲುವಾಗಿ ನೀವು ಮಾಡುತ್ತಿರುವ ಈ ತ್ಯಾಗ ನಿಜಕ್ಕೂ ದೊಡ್ಡದು. ನೀವು ಮೈಸೂರಿಗೆ ಹೊರಡಿ. ನನ್ನನ್ನು ಕೆಟ್ಟದಾರಿಗೆ ಇಳಿಯದಂತೆ ಸಹಕರಿಸಿದ್ದಕ್ಕೆ ವಂದನೆಗಳು. ಅವರ ಹತ್ತಿರ ವಿಚ್ಛೇದನಕ್ಕೆ ಸಹಿ ಹಾಕಿಸಿ, ಅವರನ್ನು ಅವರ ತಾಯಿ ಮನೆಗೆ ಮುಟ್ಟಿಸುವುದು ನನ್ನ ಜವಾಬ್ದಾರಿ. ಸರಿಯೇ ?" ಎಂದು ಆತನನ್ನು ಬೀಳ್ಕೊಟ್ಟು, ಅವರ ಮನೆಗೇ ಹೋದ—ಈತನಿಗಿಂತ ಮುಂಚೆಯೇ.

ಮಾರನೇ ದಿನವೇ ಪ್ರಸಾದ್‌ನ ಸಂಸಾರ ಮೈಸೂರಿಗೆ ಹೊರಟಿತು. ಎಲ್ಲರಿಗೂ ದಿಗ್ಭ್ರಮೆ. ಆದರೆ ಯಾರೂ ಆತನನ್ನು ಏನೂ ಕೇಳಲಾರರು. ಜ್ವಾಲಾಮುಖಿಯನ್ನು ಒಳಗಿಟ್ಟುಕೊಂಡು, ಜಗತ್ತನ್ನು ಎದುರಿಸುವ ಧೈರ್ಯವನ್ನು ಒಗ್ಗೂಡಿಸಿಕೊಂಡು ಮೈಸೂರಿನ ಶಾಖೆಯ ಮ್ಯಾನೇಜರ್‌ನ ಕೆಲಸ ನಿರ್ವಹಿಸತೊಡಗಿದ.

ನಂತರ ಒಂದಿನ ಆತನಿಂದ ನಿಜ ವಿಷಯ ತಿಳಿದ ತಾಯಿ ಮಾತ್ರ—"ಇದು ಅನ್ಯಾಯ, ಪರಮ ಅನ್ಯಾಯ "—ಅಂತ ಅಳ್ತಾ ಇದ್ದರು. ಆದರೆ ಅದು ಅರಣ್ಯರೋದನವಾಗಿತ್ತು.

ಈಗ ಮೂರ್‍ನಾಲ್ಕು ವರ್ಷಗಳೇ ಕಳೆದಿವೆ. ಅನೇಕ ಬದಲಾವಣೆಗಳಾಗಿವೆ. ಈತನ ವಿಚ್ಛೇದಿತ ಪತ್ನಿ ಎಮ್‌ಡಿ ಆನಂದ್‌ನ ಪತ್ನಿಯಾಗಿ ವೈಭವದಿಂದ ಮೆರೆಯುತ್ತಿದ್ದಾಳೆ. ಆನಂದ ಸಾಗರದಲ್ಲಿ ತೇಲುತ್ತಿದ್ದಾಳೆ. ಆದರೆ ಪ್ರಸಾದ್ ಮಾತ್ರ—ಮನದಲ್ಲೇ ಕೊರಗುತ್ತಾ—

'ಭಾರ್ಯಾ ರೂಪವತೀ ಶತ್ರುವೋ ಅಥವಾ ನನ್ನ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸಲು ಅನುವು ಮಾಡಿಕೊಟ್ಟ ರೂಪವತೀ ಭಾಗ್ಯನನಗೆ ಮಿತ್ರಳೋ...' ಎಂಬ ಸಮಸ್ಯೆಗೆ ಉತ್ತರ ದೊರೆಯದೇ—ಅವಳ ನೆನಪಲ್ಲೇ ದಿನಗಳನ್ನು ದೂಡುತ್ತಿದ್ದಾನೆ. ಮನೆ ಮತ್ತು ಕಂಪನಿಯ ಕರ್ತವ್ಯದ ಹೊರತಾಗಿ ಆತನಿಗೆ-ತನ್ನ ಜೀವನದಲ್ಲಿ-ಯಾವುದೇ ತರಹದ ಆಸಕ್ತಿಯೇ ಇಲ್ಲ. ಪತ್ನಿಯ ನೆನಪೊಂದೇ-ಆಸರೆ-ಜೀವನ ಕಳೆಯಲು !

●

# ವನಿತಾ

## 1992 ರ ದೀಪಾವಳಿ ಕಾದಂಬರಿ ಸ್ಪರ್ಧೆ

ನವೆಂಬರ್ (1992) ವನಿತಾ 'ದೀಪಾವಳಿ' ವಿಶೇಷಾಂಕವಾಗಿ ಹೊರಬರಲಿದ್ದು ಆ ಸಂಚಿಕೆಗಾಗಿ ಕಾದಂಬರಿ ಸ್ಪರ್ಧೆಯನ್ನು ಏರ್ಪಡಿಸಲಿದ್ದೇವೆ. ಸ್ಪರ್ಧೆಗೆ ಸಂಬಂಧಿಸಿದ ವಿವರಗಳು ಇಂತಿವೆ.

* ಕಾದಂಬರಿ ವಸ್ತುವಿನ ಆಯ್ಕೆ ಲೇಖಕಿಯರದೇ ಆಗಿದೆ. ವೈವಿಧ್ಯತೆಗೆ ಪ್ರಾಶಸ್ತ್ಯ.
* ಹಸ್ತಪ್ರತಿ ಸರಿಸುಮಾರು ಇನ್ನೂರು ಪುಟ (ಫೂಲ್ಸ್‌ಕ್ಯಾಪ್) ಗಳಷ್ಟಿರಲಿ.
* ಎಲ್ಲ ಲೇಖಕಿಯರಿಗೂ ಸ್ಪರ್ಧೆಯಲ್ಲಿ ಭಾಗವಹಿಸಲು ಸಂಪೂರ್ಣ ಅವಕಾಶವಿದೆ.
* ಕಾದಂಬರಿ ಯಾವುದೇ ಭಾಷೆಯ ಕೃತಿಯ ಅನುವಾದವೋ ಅನುಕರಣೆಯೋ ಆಗಿರದೆ ಸ್ವತಂತ್ರವಾಗಿರಬೇಕು. ಹಾಗೂ ಅದರ ಪ್ರತಿಯನ್ನು ಬೇರೆ ಪತ್ರಿಕೆಗಳಿಗೆ ಕಳಸಿರಲೂ ಬಾರದು (ದೃಢೀಕರಣ ಪತ್ರ ಅಗತ್ಯ).
* ತೀರ್ಪುಗಾರರ ತೀರ್ಮಾನವೇ ಅಂತಿಮ.

**ಪ್ರಥಮ ಬಹುಮಾನ ...6,000/- ರೂ.**
**ದ್ವಿತೀಯ ಬಹುಮಾನ ...4,000/- ರೂ.**

**ಹಾಗೂ ತೀರ್ಪುಗಾರರ ಮೆಚ್ಚಿಗೆ ಪಡೆದ ಕಾದಂಬರಿ**

ಹಸ್ತ ಪ್ರತಿಗಳು ಕಾರ್ಯಾಲಯ ಬಂದು ಸೇರುವ ಕೊನೆಯ ದಿನಾಂಕ ***30-6-1992.***




ಆಯ್ಕೆಯಾದ ಕಥೆಗಳಿಗೆ ಚಿತ್ರ ಹಾಕಿ ಪ್ರಕಟಿಸುವುದು ವಾಡಿಕೆ. ಈಗ ಲೇಖಕಿಯರಿಗೆ ಇಲ್ಲಿ ಚಿತ್ರವೊಂದನ್ನು ಕೊಟ್ಟಿದ್ದೇವೆ. ಈ ಚಿತ್ರಕ್ಕೆ ಸೂಕ್ತ ಕಥೆಯನ್ನು ಬರೆದು ಕಳಿಸಲು ಈ ಮೂಲಕ ಕೋರುತ್ತಿದ್ದೇವೆ. ಕಥೆ ಎರಡು ಫೂಲ್‌ಸ್ಕೇಪ್ ಹಾಳೆಯ ಒಳಗಿರಬೇಕಾದುದು ಅಗತ್ಯ. ಆಯ್ದ ಮೂರು ಕಥೆಗಳನ್ನು ಪ್ರಕಟಿಸಲಾಗುವುದು. ಪ್ರಕಟಿತ ಪ್ರತಿಯೊಂದು ಕಥೆಗೂ 50/- ರೂ. ಸಂಭಾವನೆ ಇದೆ. ಕಥೆಗಳನ್ನು ಹಿಂದಿರುಗಿಸಲಾಗುವುದಿಲ್ಲವಾದುದರಿಂದ ಅಂಚೆ ಚೀಟಿಗಳನ್ನು ಅಂಟಿಸಿ ಕಳಿಸಬಾರದಾಗಿ ಕೋರಲಾಗಿದೆ.

ಕಥೆಗಳು ಬಂದು ತಲುಪುವ ಕೊನೆಯ ದಿನಾಂಕ 20- 4-1992.

1991 ರ ಯುಗಾದಿ ಕಾದಂಬರಿ ಸ್ಪರ್ಧೆಯಲ್ಲಿ ತೀರ್ಪುಗಾರರ ಮೆಚ್ಚುಗೆ ಪಡೆದ ಕಾದಂಬರಿ



# ಸಾಧನಾ




ಡಾ।। ಎಚ್. ಗಿರಿಜಮ್ಮ

ಬಿಳಿ ಸೀರೆಯುಟ್ಟು ವಾರ್ಡಿನ ಗೋಡೆಯೊಂದಕ್ಕೊರಗಿ ಕಿಟಕಿಯಿಂದ ಹೊರಗೆ ನೋಡುವಂತೆ ನಿಂತಿದ್ದ ಅವಳ ಮುಖ ದುಗುಡದಿಂದ ತುಂಬಿತ್ತು. ಕಣ್ಣುಗಳಲ್ಲಿ ಶೂನ್ಯತೆ! ನೋವು!! ಮೋನಾ ಹತ್ತಿರ ಬಂದು ನಿಂತಿದ್ದೂ ಅವಳ ಗಮನಕ್ಕೆ ಬರಲಿಲ್ಲ. ಜೋರಾಗಿ ಬಡಿದ ಬಾಗಿಲ ಸದ್ದು ಎಚ್ಚರಿಸಲಿಲ್ಲ. ಶಿಲೆಯಲ್ಲಿ ಕಡೆದ ವಿಗ್ರಹದಂತೆ ನಿಂತಿದ್ದ ಅವಳ ಕಣ್ಣುಮುಂದೆ ಕಾಣುತ್ತಿದ್ದುದು, ಬೆಳಿಗ್ಗೆ ನಡೆದ ಹೃದಯ ಬಿರಿಯುವಂತಹ ಸಂದರ್ಭ.

ಆ ದಿನ ಬೆಳಿಗ್ಗೆ ವಾರ್ಡಿನಲ್ಲಿ ಕೆಲಸ ಮಾಡುತ್ತಾ ಬರುತ್ತಿದ್ದ ಸಾಧನಾಳ ಕಣ್ಣುಗಳು ಮೋನಾಳ ಭುಜದ ಮೇಲಿಂದ ಹಾಯ್ದು ಹೋಗುತ್ತಿದ್ದಂತೆಯೇ ತಟ್ಟನೆ ನಿಂತವು. ಡಾಕ್ಟರ್ ರಮೇಶ್ ತನ್ನ ಯೂನಿಟ್ಟಿನವರೊಂದಿಗೆ ರೌಂಡಿಗೆ ಬರುತ್ತಾ ಇದ್ದ. ಹತ್ತಾರು ವೈದ್ಯ ರೋಗಿಗಳಿದ್ದ ಗುಂಪಿನಲ್ಲಿ ಕಂಡವನು ರಮೇಶ್ ಒಬ್ಬನೇ! ಅವನ ಮುಖವನ್ನು ಪ್ರತ್ಯೇಕಿಸಿ ನೋಡಿದ ಅವಳ ಹೃದಯ ಒಮ್ಮೆ ಬಡಿತವನ್ನು ನಿಲ್ಲಿಸಿ ಪುನಃ ಬಡಿಯ ತೊಡಗಿತು. ವೇಗವಾಗಿ ಬಡಿಯ ತೊಡಗಿದ ಹೃದಯವನ್ನು ಎಡಗೈಯಿಂದ ಒತ್ತಿಹಿಡಿದು ಉದ್ವೇಗದಿಂದ 'ರಮೇಶ್' ಎಂದು ಕರೆಯಲು ಯತ್ನಿಸಿದಳು ಆದರೆ ತುಟಿಗಳು ಚಲಿಸಲಿಲ್ಲ. ಸ್ವರ ಹೊರಡಲಿಲ್ಲ ... ಉದ್ವೇಗದಿಂದ ತುಡಿಯುತ್ತಿದ್ದ ಹೃದಯದೊಂದಿಗೆ ಮುಂದೆ ಬಂದಳು. ಅವಳನ್ನು ಹಾದು ಹೋಗುವಾಗ ರಮೇಶ್ ನೋಡಿಯೂ ನೋಡದವನಂತೆ, ನೋಡಿ, ಸಹೋದ್ಯೋಗಿಗಳೊಂದಿಗೆ ಗಹನವಾದ ಚರ್ಚೆಯಲ್ಲಿದ್ದ ವಸಂತ್ ಮುಂದಕ್ಕೆ ಹೆಜ್ಜೆ ಹಾಕಿದ ... ಮಿಂಚು ನೋಟದಲ್ಲಿ, ಕಂಡದ್ದು ಹೊಸಬನಾಗಿ ಬಂದಿದ್ದ ರಮೇಶ್ !

ಅವಳ ಮುಖ ಹಿಂಜಿದ ಹತ್ತಿಯಂತೆ ಬಿಳಿಚಿಕೊಂಡಿತು. ನಿಂತಿದ್ದ ಕಾಲುಗಳು ಅಸ್ಥಿರತೆಯಿಂದ ನಡುಗಿದವು.

"ರಮೇಶ್...ಬದಲಾಗಿದ್ದಾರೆ..." ಅವಳಿಗರಿವಿಲ್ಲದೇ ಅವಳ ಬಾಯಿಂದ ಸ್ವರ ಹೊರಟು ಬಂದಿತು.

"ಏನಂದೆ? ಯಾಕೆ ಒಂಥರಾ ನಿಂತುಬಿಟ್ಟೆ?" —ಎಂಬ ಮೋನಾಳ ಪ್ರಶ್ನೆಗೆ ಮಂಜಿನಂತೆ ಕೊರೆಯುತ್ತಿದ್ದ ಸಾಧನಾಳ ಬಿಗಿಯಾದ ಕೈಗಳ ಹಿಡಿತ.

"ಸಾಧನಾ..."—ಹತ್ತಿರ ಬಂದ ಮೋನಾ ಮೃದುವಾಗಿ ಕರೆದಳು.

"ಆ್ಞಂ!"—ಬೆಚ್ಚಿ ಬಿದ್ದವಳಂತೆ ತಿರುಗಿ ನೋಡಿದ ಸಾಧನಾ ಸಾವರಿಸಿಕೊಂಡು,

"ಓಹ್. ನೀನಾ?... ಹೋಗಲ್ವಾ?" ಎಂದು ಕೇಳಿದಳು.

"ಯಾರಿಗಾಗಿ ಕಾಯ್ತಾ ಇದ್ದೀಯಾ?"

ಸಾಧನಾಳ ಮುಖ ಮ್ಲಾನವಾಯಿತು. ವಿಷಾದದಿಂದ ನಕ್ಕು. "ನೀನಲ್ಲದೆ...ನನ್ನನ್ನು ಹುಡುಕಿಕೊಂಡು ಬರುವವರ್‍ಯಾರಿದ್ದಾರೆ?"—ಕಣ್ಣುಗಳ ತುಂಬ ನೀರು ತುಂಬಿ, ಹೇಳಿದಳು.

"ಯಾಕೆ ಸುಳ್ಳು ಹೇಳ್ತೀಯಾ?...ನಿನ್ನ ರಮೇಶ್...ಪುನಃ ಇಲ್ಲಿಗೇ ಬಂದರಲ್ಲ..."—ಛೇಡಿಸುವ ದನಿಯಲ್ಲಿ ಹೇಳಿದಳು.

"ಅಂ?...ಹೌದು...ಇದೇ ಆಸ್ಪತ್ರೆಗೆ... ವಾರ್ಡಿಗೆ ಬಂದಿದ್ದಾರೆ..."

"ಊರಿಗೆ ಬಂದು ತಿಂಗಳಾಯಿತಂತೆ...ನಿನ್ನನ್ನು ಬಂದು ಮಾತನಾಡಿಸಿಯೇ ಇಲ್ಲವೇ?"—ಚಕಿತಳಾಗಿ ಕೇಳಿದಳು.

"ನಾನೇ ಊರಲ್ಲಿರಲಿಲ್ಲವಲ್ಲ...ಈ ಕ್ಯಾನ್ಸರ್ ವಾರ್ಡಿಗೆ ಪೋಸ್ಟಿಂಗ್ಸ್ ಹಾಕಿದ್ದು ನಿನ್ನೆಯಿಂದ ತಾನೆ?"

"ಸಾಧನಾ......"

"ಊರಿಂದ ಬಂದ ಆಯಾಸ...ನಾನೇ ಹೊರಗೆ ಬರಲಿಲ್ಲ..."

"ಸಾಧನಾ...ಈ ಕಡೆ ತಿರುಗು...ಎಲ್ಲಿ ನನ್ನ ಕಣ್ಣುಗಳನ್ನು ನೋಡಿ ಮಾತನಾಡು..."

ಸಾಧನಾ ನೀರು ತುಂಬಿದ ಕಣ್ಣುಗಳನ್ನೆತ್ತಿ ನೋಡಿದಳು. ಬಿಳಿಚಿಕೊಂಡಂತಿದ್ದ ತುಟಿಗಳು ಕಂಪಿಸುತ್ತಿದ್ದವು. ಗಂಟಲುಬ್ಬಿ ಬರತೊಡಗಿತ್ತು.

"ಯಾಕೆ? ಏನಾಯ್ತು?...ಮನಸ್ತಾಪ ಕಟ್ಕೊಂಡಿದ್ದೀಯೇನೆ?"—ಮೋನಾ ಕಾತುರದಿಂದ ಕೇಳಿದಳು.

"ಮೋನಾ...ಈಗ ಬಂದಿರೋದು...ನನ್ನ ರಮೇಶ್ ಅಲ್ಲ ಕಣೆ...ನನ್ನನ್ನು ನೋಡಿದ ನೆನಪಿನ ಗುರುತೂ ಅವರ ನೋಟದಲ್ಲಿ ಕಾಣದಿದ್ದಾಗ, ನನ್ನೊಂದಿಗೆ, ಮನಸ್ಸು ಕಲೆತು, ಪ್ರೀತಿಯಿಂದ ಸ್ನೇಹದಿಂದ ಹೃದಯವನ್ನು...ಆದರಿಸಿಕೊಂಡವರು ನೀವೇಂತಾ ಹೋಗಿ ಹೇಗೇ...ಹೇಗೆ ...ಕೇಳಿಕೊಳ್ಳಲಿ?..."—ದುಃಖದಿಂದ ಬಿಕ್ಕುತ್ತಾ ಸಾಧನಾ ಹೇಳುತ್ತಾ ಮೋನಾಳ ಭುಜ ಕೊರಗಿದಳು.

"ನನ್ನ ಜೀವವಾಗಿದ್ದ...ನನ್ನ ಸರ್ವಸ್ವವೂ ಆಗಿದ್ದ ರಮೇಶ್ ಇವರೇ ಎಂದು ಹೇಗೆ ಹೇಳಲಿ? ಮೂರು ವರ್ಷಗಳು ನೂರು ವರ್ಷಗಳ ಅಂತರವನ್ನು ತಂದುಬಿಟ್ಟಿದೆಯಲ್ಲೇ..."—ಬಿಕ್ಕಿದಳು.

"ಈಗ ಅಂಥಾದ್ದೇನೂ ಆಗಿಲ್ಲ. ಕಣ್ಣೀರು ಒರೆಸಿಕೊ... ಇದು ವಾರ್ಡು...ನೋಡಿದವರು ಏನಂದುಕೊಂಡಾರು?...ಗುಂಪಿನಲ್ಲಿ ಇನ್ನು ಅನೇಕ ಡಾಕ್ಟರುಗಳಿದ್ದುದರಿಂದ ಹಾಗೆ ಹೋಗಿರಬಹುದು... ಈ ಸಾಯಂಕಾಲವೇ ಬಂದು ನಿನ್ನನ್ನು ಭೇಟಿ ಮಾಡ್ತಾರೆ...ನೋಡ್ತಾಯಿರು... ಪ್ರೀತಿ...ಎಂದೂ ಸುಳ್ಳಲ್ಲ...ಈ ಆಸ್ಪತ್ರೆಯ ಗೋಡೆ ಗೋಡೆಗೆಲ್ಲ ತಿಳಿದ ವಿಷಯ..."—ಮೋನಾ ಸ್ನೇಹಿತೆಯನ್ನು ಸಾಂತ್ವನ ಗೊಳಿಸಿದಳು...ಸ್ನೇಹಿತೆಯ ಮಾತಿಗೋ ಜನರು ನೋಡಿಯಾರೆಂಬ ಅಂಜಿಕೆಗೋ ಕಣ್ಣೀರನ್ನು ಕರ್ಚೀಫಿನಿಂದೊರೆಸಿಕೊಂಡ ಸಾಧನಾ ನಿಧಾನವಾಗಿ, ವಾರ್ಡಿನತ್ತ ಹೆಜ್ಜೆ ಹಾಕುತ್ತಿದ್ದಂತೆಯೇ ಮನಸ್ಸು...ಹಿಂದೆ ನಡೆದ ಘಟನೆಗಳ ಮೇಲೆ ಹಾಯತೊಡಗಿತ್ತು.

* * *

ನರ್ಸಿಂಗ್ ಕೋರ್ಸನ್ನು ಮುಗಿಸಿ ಬಂದು ಕೆಲಸಕ್ಕೆ ಸೇರಿದ್ದ ಸಾಧನಾ ಉತ್ಸಾಹದಿಂದ ಆಸ್ಪತ್ರೆಗೆ ಕಾಲಿಟ್ಟಿದ್ದಳು. ತಾನು ಈ ಕೆಲಸವನ್ನೇ ಆಯ್ಕೆ ಮಾಡಿಕೊಂಡಿದ್ದು, ರೋಗಿಗಳ ಸೇವೆಯನ್ನು ತುಂಬು ಮನಸ್ಸಿನಿಂದ, ಮಾನವೀಯತೆಯಿಂದ ಮಾಡಿ, ಆದಷ್ಟು ಹೆಚ್ಚು ಸಮಯವನ್ನು ರೋಗಿಗಳ ಬಳಿಯೇ ಕಳೆಯುವಾಸೆಯಿಂದ. ಯಾವ ಸಿನಿಮಾ, ಕಾದಂಬರಿ ಓದಿ, ನೋಡಿ, ಉತ್ತೇಜನಗೊಂಡು ಬಂದವಳಲ್ಲದ ಸಾಧನಾಳಿಗೆ, ಪಾರ್ಶ್ವ

## ಅಗ್ನಿಪರೀಕ್ಷೆ

ಟೆಂಪೋ ಯಜಮಾನನಿಗೂ ಅದರ ಡ್ರೈವರ್‌ಗೂ ಡೀಸೆಲ್-ಸೀಮೆ ಎಣ್ಣೆಗಳ ಬಗ್ಗೆ ಉಂಟಾದ ಚರ್ಚೆ ಅಗ್ನಿಪರೀಕ್ಷೆಯಲ್ಲಿ ಪರಿಸಮಾಪ್ತಿಯಾದ ಘಟನೆಯೊಂದು ಸಮೀಪದಲ್ಲಿ ಮದರಾಸಿನಲ್ಲಿ ನಡೆಯಿತು. ತರಕಾರಿಗಳನ್ನು ಮದರಾಸಿನ ಬೇರೆ ಬೇರೆ ಸ್ಥಳಗಳಿಗೆ ಸಾಗಿಸುತ್ತಿದ್ದ ಟೆಂಪೊ ಒಂದರ ಡ್ರೈವರ್ ತನ್ನ ಯಜಮಾನನಲ್ಲಿ ಆಗಾಗ ಡೀಸೆಲ್‌ಗೆಂದು ಹಣ ಪಡೆದು ಸೀಮೆ ಎಣ್ಣೆ ತುಂಬಿ ವ್ಯಾನ್ ಓಡಿಸುತ್ತಿದ್ದ. ಇದರಿಂದ ವಾಹನಕ್ಕೆ ಆಗಾಗ ರಿಪೇರಿ ಆಗುತ್ತಿತ್ತು. ಬಹಳ ದಿನಗಳ ನಂತರ ಡ್ರೈವರ್‌ನ ಮೋಸದ ವ್ಯವಹಾರ ಅರಿತ ಯಜಮಾನ ಒಂದು ಬಾರಿ "ಟ್ಯಾಂಕಿನಲ್ಲಿ ಏನು ತುಂಬಿಸಿದ್ದೀಯ?" ಎಂದು ಡ್ರೈವರ್‌ಗೆ ನೇರವಾಗಿ ಕೇಳಿದ. 'ಡೀಸೆಲ್' ಎಂದು ಡ್ರೈವರ್ ಉತ್ತರಿಸಿದ. ನಂಬದ ಯಜಮಾನ ಟ್ಯಾಂಕ್ ತೆರೆದು ಮೂಸಿದ. ಮೂಗು ಸೀಮೆ ಎಣ್ಣೆಯ ವಾಸನೆ ಗುರುತಿಸಿತು. ಕೋಪಗೊಂಡ ಯಜಮಾನ ಅದೇ ಟ್ಯಾಂಕಿನಿಂದ ಎಣ್ಣೆ ಬಗ್ಗಿಸಿ ತೆಗೆದು ಡ್ರೈವರ್‌ಗೆ ಅಭಿಷೇಕ ಮಾಡಿ 'ಇದು ನಿಜವಾಗಿಯೂ ಡೀಸೆಲ್ ಆಗಿದ್ದರೆ ಬೆಂಕಿ ಹಿಡಿಯುವುದಿಲ್ಲ' ಎಂದು ಬೆಂಕಿಕಡ್ಡಿ ಗೀರಿ ಆತನನ್ನು "ಅಗ್ನಿಪರೀಕ್ಷೆ"ಗೆ ಗುರಿಪಡಿಸಿದ. ಅಗ್ನಿಪರೀಕ್ಷೆಯಲ್ಲಿ ತೇರ್ಗಡೆಯಾಗದ ಡ್ರೈವರ್ ಉರಿದು ಸತ್ತ. ಇಂತಹ ಶಿಕ್ಷೆಗೊಳಪಡಿಸಿದ ಯಜಮಾನ ಜೈಲು ಸೇರಿದ.

ವಾಯುವಿನಿಂದ ಹಾಸಿಗೆಯಲ್ಲಿ ಹಾಸಿಗೆಯಾಗಿ ಮಲಗಿದ್ದ ತಾಯಿ, 'ನರ್ಸಿಂಗ್ ಕೇರ್' ಸರಿಯಾಗಿಲ್ಲದ ಕಾರಣ, ದೇಹದ ಹಿಂದಿನ ಭಾಗಗಳೆಲ್ಲ ಗಾಯಗಳಾಗಿ, ಕೀವು ಸೋರಿ...ವಾಸನೆಯಿಂದ ನರಳಿದ್ದರು. ಪ್ರತಿದಿನಾ ರೌಂಡಿಗೆ ಬರುತ್ತಿದ್ದ ವೈದ್ಯರುಗಳು, ಆ ವಾರ್ಡಿನ ನರ್ಸುಗಳಿಗೆ ಕರೆದು ಏನನ್ನೋ ಹೇಳುತ್ತಿದ್ದರು. ಯಾವುದೂ ಆಗ ಸಾಧನಾಳಿಗೆ ಅರ್ಥವಾಗುತ್ತಿರಲಿಲ್ಲ. ತಂದೆಯಿಲ್ಲದ ತನ್ನನ್ನು ಮನೆಗೆಲಸ ಮಾಡಿ, ಓದಿಸಿದ್ದ ತಾಯಿಯ ಜೀವ ಮುಖ್ಯವಾಗಿತ್ತು. ಕೆಲವು ದಿನಗಳಲ್ಲಿಯೇ ಆ 'ಜೀವವು' ಅವಳನ್ನು ತೊರೆದು ಅನಾಥಳನ್ನಾಗಿ ಮಾಡಿಹೋಯಿತು...ಹದಿಹರೆಯದ ಸಾಧನಾ ಎಲ್ಲವನ್ನೂ ಕಳೆದುಕೊಂಡವಳಂತೆ ತಾಯಿಯ ಶವದ ಮೇಲೆ ಬಿದ್ದು ಭೋರಾಡಿ ಅತ್ತಳು. ಸಂಬಂಧಿಕರು ತಾಯಿಯ ಶವವನ್ನು ಕೊಂಡೊಯ್ಯುವಾಗ, ವಾಸನೆಯಿಂದ ಮುಖ ಮುರಿದುದನ್ನು ಕಂಡು ನೋವಿನಿಂದ ಎದೆ ಬಿರಿಯುವಂತೆ ಅತ್ತಳು.

"ಡಾಕ್ಟರ್...ನನ್ನ ತಾಯಿಗೆ...ಕಾಯಿಲೆ ವಾಸಿ ಮಾಡದಿದ್ದರೂ...ಆ ಗಾಯಗಳನ್ನಾದ್ರೂ...ವಾಸಿ ಮಾಡಬಹುದಿತ್ತಲ್ಲ...'ದಿಟ್ಟತನದಿಂದ ಬಂದು ಕೇಳಿದ ಪುಟ್ಟ ಯುವತಿಯತ್ತ ನೋಡಿದ ಅವರ ಮುಖದಲ್ಲಿ ಆಶ್ಚರ್ಯ, ಮೆಚ್ಚುಗೆ ಮೂಡಿ ಮಾಯವಾಯಿತು.

"ಆ ಕಾಯಿಲೆಯವರಿಗೆ ಬೆನ್ನ ಮೇಲೆ ಗಾಯಗಳಾಗುವುದು ಸಹಜ...ಅದಕ್ಕೆ 'ಬೆಡ್ ಸೋರ್' ಅನ್ನುತ್ತೇವೆ...ನರ್ಸಿಂಗ್ ಕೇರ್ ಬಹಳ ಮುಖ್ಯಾಮ್ಮಾ...ಪ್ರತಿಯೊಬ್ಬ ರೋಗಿಯ ಮುಂದೆ ಒಬ್ಬೊಬ್ಬ ಡಾಕ್ಟರ್ ಕೂತ್ಕೋಳೋಕೆ ಆಗುತ್ತ್ಯೇ?" —ಎಂದು ಪ್ರಶ್ನೆಯಲ್ಲೇ ಉತ್ತರ ಹೇಳಿ ಕಳುಹಿಸಿದ್ದರು. ಅಲ್ಲಿಂದ ನೇರವಾಗಿ ವಾರ್ಡಿನ ನರ್ಸ್ ಬಳಿ ಬಂದು ಅದೇ ಪ್ರಶ್ನೆಯನ್ನು ಹಾಕಿದಳು.

"ನೋಡು...ಹುಡುಗಿ...ಬಡವರಿಗೆ ಕಾಯಿಲೆ ಬರಬಾರದು. ಬಂದ್ರೂ ಈ ಪ್ಯಾರಾಲಿಸಿಸ್ ಬರಲೇ ಬಾರದು...ಪೌಡರ್, ಮಾತ್ರೆಗಳು ಆಯಿಂಟ್‌ಮೆಂಟನ್ನು ಬರೆದು ಕೊಟ್ಟರೆ ಎಷ್ಟು ತಂದುಕೊಟ್ಟೀರಿ? ಆಸ್ಪತ್ರೆಯಲ್ಲಿ ಇಲ್ಲದ್ದನ್ನು ಮನೆಯಿಂದ ತರಲೆ? ಮನೆ ಮಠ ಬಿಟ್ಟು ನಿನ್ನ ತಾಯಿಯ ಬಳಿಯೇ ಇರಬೇಕಿತ್ತೇ?"

"ಆದರೂ...ಹಾಸಿಗೇಲೇ ಮಲ ಮೂತ್ರ ಮಾಡಿದ್ದರಿಂದಲೂ ಆ ವಾಸನೆ...ಗಾಯಗಳಾಗಿರಬಹುದು...ಅಲ್ವಾ ಸಿಸ್ಟರ್..."

"ಇರಬಹುದು...ಆ ಜವಾಬ್ದಾರಿ...ನನ್ನದಲ್ಲ...ನೀನೇ ನಿಂತು ಮಾಡುತ್ತಿದ್ದೆ...ನನಗಿಂತ ನಿನಗೇ ಹೆಚ್ಚು ತಿಳಿದಿರಬೇಕು."

"ನಾನು ನಿಮ್ಮ ಓದು ವಿದ್ಯೆ ತಿಳಿದವಳಲ್ಲ..."

"ಓದಿ ತಿಳ್ಕೊಂಡು ಬಾ...", ಎಂದು ಮುಂದೆ ಮಾತನಾಡಲು ಇಷ್ಟಪಡದವಳಂತೆ ಮುಂದಿನ ರೋಗಿ ಟೆಂಪರೇಚರ್ ರೆಕಾರ್ಡ್ ಮಾಡಲು ಟ್ರೇ ಹಿಡಿದು ಮುಂದೆ ನಡೆದಳು.

ಸಂತಾಪದಿಂದ ಸಾಧನಾಳ ಮೈ ಉರಿಯಿತು.

"ನೋಡ್ತಾಯಿರಿ...ಓದಿದ್ದೇನೆ...ಆದರೆ ಈ ವಿದ್ಯೆಯನ್ನೇ ತಿಳಿದು ಬಂದು ನಿಮ್ಮ ಮುಂದೇನೇ ನಿಲ್ಲುತ್ತೇನೆ...ಈ ವಿಧದ ನಿರ್ಲಕ್ಷ್ಯಗಳನ್ನು ಹೇಗೆ ಕೊಂದು ಕೆಲಸ ಮಾಡುತ್ತೇನೆ..." ಎಂದು ಸಮಾಧಾನ ತಂದುಕೊಂಡು ಹೊರಗೆ ಬಂದ ಅವಳ ಮುಖದಲ್ಲಿ ಅಚಲವಾದ ನಂಬಿಕೆ...ಹೆಜ್ಜೆಗಳಲ್ಲಿ ದೃಢತೆ ಮೂಡಿದ್ದವು. ನಾಲ್ಕು ವರ್ಷಗಳ ನಂತರ ತನ್ನಾಸೆಯಂತೆ, ಗುರಿ ಸಾಧಿಸುವವಳಂತೆ ಆಸ್ಪತ್ರೆಯ ಮೆಟ್ಟಲೇರುವಾಗ ಅವಳ ಹೃದಯದಲ್ಲಿ ಅನೇಕ ಭಾವನೆಗಳ ಕೋಲಾಹಲ ನಡೆದಿತ್ತು. ...ಎಲ್ಲವನ್ನೂ ಹತ್ತಿಕ್ಕಿ ಸೇವಾ ಮನೋಭಾವದಿಂದ ಮಾನವೀಯತೆಯಿಂದ ದುಡಿಯಲು ನಿರ್ಧರಿಸಿ ಅದರಂತೆಯೇ ವರ್ತಿಸುತ್ತಿದ್ದ, ಸಾಧನಾಳನ್ನು ಕಂಡು ಮೊದಲು ಮೊದಲು ಎಲ್ಲರೂ ಹೀಗೇ' ಎಂದು ಮೂಗು ಮುರಿದು ಮಾತನಾಡುತ್ತಿದ್ದ ಸಹೋದ್ಯೋಗಿಗಳು, ಅವಳ ಆಸಕ್ತಿ, ಉತ್ಸಾಹ ಬತ್ತದ ಚಿಲುಮೆಯಂತಾಗ ತೊಡಗಿದಾಗ ಬಾಯಿ ಮುಚ್ಚಿಕೊಂಡರು.

ದಿನಗಳು ಉರುಳತೊಡಗಿದ್ದವು.

ಸಾಧನಾ ಅದೆಷ್ಟು ಉತ್ಸಾಹದಿಂದ ವಾರ್ಡಿನೊಳಗೆ ಕಾಲಿಡುತ್ತಿದ್ದಳೋ ಅಷ್ಟೇ ಬೇಗ ತಣ್ಣಗಾಗಿ ಬಿಡುತ್ತಿದ್ದಳು. ನಾನಾ ರೋಗಿಗಳ ನರಳಾಟ...ಸತ್ವಹೀನ ಮುಖ, ಬಿಳಿಚಿಕೊಂಡಿದ್ದ ತುಟಿಗಳೂ ಒಣಗಿದ ಸ್ವರ, ಕಾಂತಿಹೀನವಾದ ಕಣ್ಣುಗಳು...ಪ್ರತಿಕ್ಷಣಗಳನ್ನು ವರ್ಷಗಳಂತೆ ಅನುಭವಿಸುತ್ತಿದ್ದ ಅವರನ್ನು ಕಂಡ ಕೂಡಲೇ ಅವಳ ಕಣ್ಣುಗಳು ಒದ್ದೆಯಾಗಿ ಅವಳಿಗರಿಯದೇ ಗಂಟಲುಕಟ್ಟಿ ಬರುತ್ತಿತ್ತು...ಅದೂ ತನ್ನ ಈ ವೃತ್ತಿಗೆ?

ಎಂಟನೆಯ ವಾರ್ಡಿಗೆ ಮೊದಲ ಬಾರಿಗೆ ಕಾಲಿಟ್ಟುದರಿಂದ, ಚಾರ್ಜ್ ಕೊಟ್ಟು ಹೋಗಬೇಕಾಗಿದ್ದ ಸಹೋದ್ಯೋಗಿ ಅಲ್ಲಿದ್ದ ವಿದ್ಯಾರ್ಥಿನಿಯಾಗಿದ್ದ ನರ್ಸ್‌ಗೆ ಹೇಳಿ ಹೋಗಿದ್ದುದರಿಂದ ಸ್ಟೆರ್‌ಲೈಜರ್‌ನ್ನು ಸ್ವಚ್ಛಗೊಳಿಸಿ, ಔಷಧಿಗಳನ್ನು,

(33 ನೇ ಪುಟ ನೋಡಿ)



# ಫನಲ್ ಡಾಲ್

ಸಾಮಾನ್ಯವಾಗಿ ಗೃಹಿಣಿಯರ ಕಣ್ಣು ತಾವು ಭೇಟಿ ನೀಡುವ ಮನೆಗಳ ಶೋಕೇಸ್‌ಗಳಲ್ಲಿ ನೆಟ್ಟಿರುತ್ತದೆ. ವಿಧ ವಿಧವಾದ ಬೊಂಬೆಗಳು, ಮಣಿ ಸಾಮಾನು, ಹೂದಾನಿಗಳು, ಇತ್ಯಾದಿಗಳ ಅಪೂರ್ವ ಸಂಗಮ ಶೋಕೇಸ್! ಗೃಹಿಣಿಯರು ತಮ್ಮ ಸ್ವಲ್ಪ ಸಮಯವನ್ನು ಕರಕುಶಲತೆಗೆ ಮೀಸಲಾಗಿರಿಸಿದರೆ, ತಮ್ಮ ಮನೆಯ ಅಂದ ಹೆಚ್ಚಿಸಲು ಈ ಬೊಂಬೆಯನ್ನು ತಯಾರಿಸಿ, ನಿಮ್ಮ ಗೆಳತಿಯರ ಕಣ್ಣು ಹೊಸ ಬೊಂಬೆಯಲ್ಲಿ ನೆಡುವಂತೆ ಮಾಡಬಹುದು!

**ಬೇಕಾಗುವ ಸಾಮಾನು:**

1. ಒಂದು ಮೀಡಿಯಂ ಸೈಜಿನ ಫನಲ್ (ಪ್ಲಾಸ್ಟಿಕ್‌ದು)
2. ಚಿನ್ನದ ಬಣ್ಣದ ಚಮಕಿ 10 ಗ್ರಾಮ್ ಮತ್ತು ಚಿಕ್ಕ ಕನ್ನಡಿ 10–12.
3. ವೆಲ್‌ವೆಟ್ ಬಟ್ಟೆ ½ ಮೀಟರ್
4. ಜರಿ ಲೇಸ್ 4 (ಸಣ್ಣದು) ಮೀಟರ್
5. ಒಂದು ಪ್ಲಾಸ್ಟಿಕ್ ಬೊಂಬೆ
6. ಫೆವಿಕಾಲ್ ಸಣ್ಣ ಡಬ್ಬಿ
7. ಐಬ್ರೋಪೆನ್ಸಿಲ್, ಸಣ್ಣ ಮಣಿಗಳು, ಹಣೆಗೆ ಟಿಕಲಿ ಬಿಂದಿ

**ಮಾಡುವ ವಿಧಾನ:**

ಫನಲ್‌ನಲ್ಲಿ ಟ್ಯೂಬ್‌ನ ಭಾಗ ಕತ್ತರಿಸಿ ತೆಗೆಯಿರಿ. ಬೊಂಬೆಯ ಸೊಂಟದ ಮೇಲ್ಭಾಗ ಫನಲ್‌ನ ಹೊರಗೆ ಬರುವಂತೆ ಮತ್ತು ಕಾಲು ಫನಲ್‌ನ ಒಳಗಡೆ ಬರುವಂತೆ ತೂರಿಸಿ ಫನಲ್‌ನ ನೆಲದ ಮೇಲೆ ಗುಂಡಗೆ ಕೂರಿಸಿದಾಗ ಬೊಂಬೆಯ ಸೊಂಟದ ಮೇಲ್ಭಾಗ ಫನಲ್‌ನ ಹೊರಗಡೆಗೆ ಕಾಣಿಸುತ್ತದೆ. ಮೊದಲು ವೆಲ್ವೆಟ್ ಬಟ್ಟೆಯನ್ನು ಫನಲ್ ಮೇಲೆ ಫೆವಿಕಾಲ್ ಹಾಕಿ ಅಂಟಿಸಬೇಕು. ಸಾಧ್ಯವಾದಷ್ಟು ಉಪಾಯದಿಂದ ಬಟ್ಟೆ ವೇಸ್ಟ್ ಆಗದ ಹಾಗೆ ಅಂಟಿಸಿ ಮತ್ತು ಹೆಚ್ಚಿನ ಬಟ್ಟೆ ಕತ್ತರಿಸಿ ಕುತ್ತಿಗೆ ಯಿಂದ ಸೊಂಟದ ವರೆಗೂ ಮತ್ತು ತೋಳಿಗೂ ರವಿಕೆಯಂತೆ ಅಂಟಿಸಿ. ಇಲ್ಲಿ ನಿಮಗೆ ಬೇಕಾದರೆ ಎರಡು ಬಣ್ಣದ ವೆಲ್ವೆಟ್ ಉಪಯೋಗಿಸಬಹುದು. ಈಗ ಬೊಂಬೆಯನ್ನು ಪೂರ್ತಿ ವೆಲ್ವೆಟ್‌ನಲ್ಲಿ ಮುಚ್ಚಿದ್ದೀರಿ.

ಇನ್ನು ಅಲಂಕಾರ. ಸೊಂಟಕ್ಕೆ ಸರಿಯಾಗಿ ಡಾಬಿನ ತರಹ ಜರಿಲೇಸ್ ಅಂಟಿಸಿ ಸೊಂಟದಿಂದ ಕೆಳಕ್ಕೆ ಲಂಗದ ಭಾಗವನ್ನು 4–5 ಭಾಗವಾಗಿ ವಿಂಗಡಿಸುವಂತೆ ಉದ್ದುದ್ದಕ್ಕೆ ಜರಿಲೇಸ್ ಅಂಟಿಸಿ. (ಚಿತ್ರನೋಡಿ) ಲಂಗದ ಕೆಳಭಾಗದಲ್ಲಿ ಬಾರ್ಡರ್‌ನಂತೆ ಎರಡು ಸಾಲು ಜರಿಲೇಸ್ ಅಂಟಿಸಿ. ಅಂಚಿಗೆ ಸುತ್ತಲೂ ಸಣ್ಣ ಕನ್ನಡಿ ಅಂಟಿಸಿ, ಲಂಗ ಪೂರ್ತಿ ಚಮಕಿಯನ್ನು ನಕ್ಷತ್ರಾಕಾರದಲ್ಲಿ ಅಥವಾ ಗುಂಡಗೆ ಸ್ವಲ್ಪ-ಸ್ವಲ್ಪ ದೂರಕ್ಕೆ ಅಂಟಿಸಿ.

ಎದೆಯ ಭಾಗಕ್ಕೆ ಒಂದು ಕನ್ನಡಿ ಅಂಟಿಸಿ. ಅದರ ಸುತ್ತ ಚಮಕಿ ಅಂಟಿಸಿ. ಕುತ್ತಿಗೆಯ ಹತ್ತಿರ ಮತ್ತು ತೋಳಿನ ಸುತ್ತ ಚಮಕಿ ಅಂಟಿಸಿ. ಕೈಗೆ ಬಳೆಯಂತೆ ಸಣ್ಣ ಮಣಿಯನ್ನು ಪೋಣಿಸಿ ಕಟ್ಟಿರಿ. ಐಬ್ರೋಪೆನ್ಸಿಲ್‌ನಿಂದ ಹುಬ್ಬನ್ನು ತಿದ್ದಿ ಹಣೆಗೆ ಟಿಕಳಿ ಬಿಂದಿ ಅಂಟಿಸಿ. ಜುಟ್ಟಿಗೆ ಜರಿಲೇಸ್ ಕಟ್ಟಿ ತುಟಿಗೆ ಮತ್ತು ಉಗುರುಗಳಿಗೆ ಕೆಂಪು ಬಣ್ಣ ಹಾಕಿರಿ.

ಈಗ ನಿಮ್ಮ ಬೊಂಬೆ ರೆಡಿ.

**—ಆರ್. ಸುಶೀಲ ಶ್ಯಾಮಸುಂದರನ್**

# ಕರಕುಶಲ ಕಲೆ, ಹೂಗಳ ಜೋಡಣೆ, ಹಾಗೂ ಪೇಂಟಿಂಗ್ ಕಲಾವಿದೆ ವಾಸಂತಿರಾವ್











ವಿವಿಧ ಕ್ಷೇತ್ರಗಳಲ್ಲಿ ನಿಪುಣೆಯಾಗಿರುವ ಬಹುಮುಖ ಪ್ರತಿಭೆಯ ಅಪರೂಪದ ಕಲಾವಿದೆ ಶ್ರೀಮತಿ ವಾಸಂತಿರಾವ್ ತಮ್ಮ ಮನೆಯನ್ನು ನಂದನವನವಾಗಿ ಮಾಡಿದ್ದಾರೆ. ಪತಿ ವೈ. ಎ. ರಾವ್ ಪ್ರಸಿದ್ಧ ಕನ್ನಡ-ತೆಲುಗು ಚಿತ್ರ ನಿರ್ಮಾಪಕರು.

ಅನೇಕ ವರ್ಷಗಳ ಕಾಲ ಮದರಾಸಿನಲ್ಲಿ ನೆಲೆಸಿ ತಮ್ಮ ಅಪೂರ್ವ ಕಲೆಗಳಿಂದ ಜನಮನ ಗೆದ್ದಿದ್ದ ವಾಸಂತಿ ರಾವ್ ಈಗ ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಸುಪ್ರಸಿದ್ಧ ಹಿನ್ನೆಲೆ ಗಾಯಕಿಯಾಗಿದ್ದ ದಿವಂಗತ ಬೆಂಗಳೂರು ಲತಾ ಈಕೆಯ ಸೋದರಿ. ಚಿತ್ರಕಲೆ (ಪೇಂಟಿಂಗ್), ಕರಕುಶಲ ಕಲೆಗಳು, ಹೂಗಳ ಜೋಡಣೆ, ತೋಟಗಾರಿಕೆ ಕಲೆಗಳಲ್ಲಿ ಸಿದ್ಧಹಸ್ತರಾದ ವಾಸಂತಿ ಮೆಟಲ್ ಕ್ರಾಫ್ಟ್, ಸಿರಾಮಿಕ್ ಕಲೆ, ಫಾಯಿಲ್ ವರ್ಕ್‌ಗಳನ್ನು ಕರಗತ ಮಾಡಿಕೊಂಡಿದ್ದಾರೆ. ಜತೆಗೆ ಆದರ್ಶ ಗೃಹಿಣಿಯೂ ಆಗಿದ್ದಾರೆ.

ಮದರಾಸಿನಲ್ಲಿ ತಮ್ಮ ಮನೆಯ ತೋಟಗಾರಿಕೆಯಲ್ಲಿ ತಾರಸಿಯ ಮೇಲೆ ಚಿಕ್ಕ ತುಂಡುಗಳಲ್ಲಿ ತರಕಾರಿಗಳನ್ನು ಬೆಳೆದು ಅನೇಕ ಬಹುಮಾನಗಳನ್ನೂ ಗಳಿಸಿದ್ದಾರೆ ವಾಸಂತಿ. ಜತೆಗೆ ಬಾನ್ಸಾಯ್ ಗಿಡಗಳನ್ನು ಬೆಳೆಸುವಲ್ಲಿಯೂ ಪರಿಣತಿ ಗಳಿಸಿದ್ದಾರೆ. ಇದು ಅವರಿಗೆ ಸೇಬು, ದಾಳಿಂಬೆ, ಹೂಗಿಡಗಳು ಮುಂತಾದ ಕೃತಕ ಬಾನ್ಸಾಯ್ ಗಿಡಗಳನ್ನು ಸೃಷ್ಟಿಸಲು ಸ್ಫೂರ್ತಿ ನೀಡಿದೆ. ಜತೆಗೆ ಆಕೆ ಕಾಸ್ಮೆಟಾಲಜಿಸ್ಟ್ ಕೂಡ.

ಮದರಾಸಿನಲ್ಲಿ ಫ್ಲವರ್ ಕ್ರಾಫ್ಟ್, ಕರಕುಶಲ ಕಲೆಗಳು, ಕಾಸ್ಮೆಟಾಲಜಿ, ಕುಕರಿ ಮತ್ತು ಬೇಕರಿ ತರಗತಿಗಳನ್ನು ಒಂದು ದಶಕಕ್ಕೂ ಹೆಚ್ಚು ಕಾಲ ನಡೆಸುತ್ತಿದ್ದ ವಾಸಂತಿ ಈಗ ಬೆಂಗಳೂರಿನಲ್ಲಿ ಆಸಕ್ತರಿಗಾಗಿ ಇಂಥ ತರಗತಿಗಳನ್ನು ನಡೆಸುತ್ತಿದ್ದಾರೆ. ಆಸಕ್ತಿಯಿರುವವರು 24, 2 ನೇ ಕ್ರಾಸ್, 2 ನೇ ಹಂತ, ಇಂದಿರಾ ನಗರ, ಬೆಂಗಳೂರು 560038. ಇಲ್ಲಿ ಆಕೆಯನ್ನು ಸಂಪರ್ಕಿಸಬಹುದು. ಇತ್ತೀಚೆಗೆ ಅವರು ತಮ್ಮ ಕರಕುಶಲ ಕಲಾವಸ್ತುಗಳ ಹಾಗೂ ಪೇಂಟಿಂಗ್‌ಗಳ ಪ್ರದರ್ಶನವೊಂದನ್ನು ಏರ್ಪಡಿಸಿದ್ದರು. ಹಾಗೂ ಬೆಂಗಳೂರಿನ ಕಲಾಭಿಮಾನಿಗಳ ಮೆಚ್ಚುಗೆ ಗಳಿಸಿದರು.

ಈ ಪ್ರದರ್ಶನದಲ್ಲಿ ಪ್ರದರ್ಶಿಸಲಾದ ಕಲಾಕೃತಿಗಳ ಛಾಯಾ ಚಿತ್ರಗಳನ್ನು ಇಲ್ಲಿ ಪ್ರಕಟಿಸಲಾಗಿದೆ. ●●

ನೃತ್ಯ ಗ್ರಾಮದಲ್ಲಿ 'ವಸಂತ ಹಬ್ಬ'

# ಧರೆಗಿಳಿದ ಅಮರಾವತಿ


ಕಲಾಮಂಡಲಂ ವಿದ್ಯಾರ್ಥಿನಿಯರಿಂದ ಮೋಹಿನಿ ಆಟ್ಟಂ

ಬೆಂಗಳೂರಿನಿಂದ ಇಪ್ಪತ್ತು ಕಿಲೋಮೀಟರ್‌ಗಳ ದೂರದಲ್ಲಿರುವ ಹೆಸರಘಟ್ಟ ಜಲಾಶಯದ ಸಮೀಪ ಪ್ರಶಾಂತ ಸ್ಥಳದಲ್ಲಿರುವ ನೃತ್ಯ ಗ್ರಾಮ ಫೆಬ್ರವರಿ 1 ರಂದು ರಾತ್ರಿ ಜಗಜಗಿಸುವ ವಿದ್ಯುದ್ದೀಪಗಳ ಬೆಳಕಿನಲ್ಲಿ ಇಂದ್ರನ ಅಮರಾವತಿಯಂತೆ ಕಂಗೊಳಿಸುತ್ತಿತ್ತು. ಸಂಜೆ 7 ಗಂಟೆಗೆ ಪ್ರಾರಂಭವಾದ ವಸಂತ ಹಬ್ಬ ಕಾರ್ಯಕ್ರಮಗಳು ಬೆಳಗ್ಗೆ 6 ಗಂಟೆಯ ವರೆಗೆ ಅವ್ಯಾಹತವಾಗಿ ನಡೆದವು. ಬಯಲು ರಂಗಮಂದಿರದಲ್ಲಿ ನಡೆದ ಈ ಕಾರ್ಯಕ್ರಮ ನೃತ್ಯ ಗ್ರಾಮದ ವಿದ್ಯಾರ್ಥಿಗಳ ಭರತನಾಟ್ಯದೊಂದಿಗೆ ಪ್ರಾರಂಭವಾಯಿತು. ರೇಮಾಂಡ್ ಒಡಿಸ್ಸಿ ಗುರುಕುಲದ ವಿದ್ಯಾರ್ಥಿನಿಯರಿಂದ ಮತ್ತು ಪದ್ಮಭೂಷಣ ಗುರು ಕೇಳು ಚರಣ್ ಮಹಾಪಾತ್ರ ಮತ್ತು ಅವರ ಪುತ್ರ ರತಿಕಾಂತ್ ಮಹಾಪಾತ್ರ ಅವರಿಂದ ಒಡಿಸ್ಸಿ ನೃತ್ಯ, ಕಲಾಮಂಡಲಂನ ನಾರಾಯಣ ಕುಟ್ಟಿ ಅಮ್ಮನ್ ಅವರ ವಿದ್ಯಾರ್ಥಿನಿಯರಿಂದ ಮೋಹಿನಿ ಆಟ್ಟಂ ಕಾರ್ಯಕ್ರಮಗಳು ಮುಗಿಯುವ ಹೊತ್ತಿಗೆ ಮಧ್ಯ ರಾತ್ರಿ ಸಮೀಪಿಸಿತ್ತು.

ಆದರೂ ಪ್ರೇಕ್ಷಕರು ಅತ್ಯುತ್ಸಾಹದಿಂದ ಕುಳಿತು ಕಾರ್ಯಕ್ರಮಗಳನ್ನು ವೀಕ್ಷಿಸುತ್ತಿದ್ದರು. ಕೊರೆಯುವ ಚಳಿ ಕೂಡ ಅವರನ್ನು ಬಾಧಿಸಲಿಲ್ಲ.

ಅನಂತರ ಪ್ರಾರಂಭವಾದ ಪಂಡಿತ ಜಸ್‌ರಾಜ್ ಅವರ ಹಿಂದೂಸ್ತಾನಿ ಗಾಯನ ಶ್ರೋತೃಗಳನ್ನು ಗಂಧರ್ವಲೋಕಕ್ಕೊಯ್ದಿತು. ಅವರು ಹಾಡಿದ ರಾಗ ದರ್ಬಾರಿ ಪ್ರೇಕ್ಷಕರನ್ನು ಮಂತ್ರಮುಗ್ಧಗೊಳಿಸಿತು. ಅನಂತರ ಲಯ ವಾದ್ಯಗೋಷ್ಠಿ— ವೇಲೂರು ರಾಮಭದ್ರಂ ಅವರ ನೇತೃತ್ವದಲ್ಲಿ ನಡೆದ ತಾಳವಾದ್ಯ ಕಚೇರಿಯಲ್ಲಿ ದಿಲಾವರ್‌-ಖಾನ್ ಅವರು ನುಡಿಸಿದ ನಗಾಡಾ ವಾದ್ಯ ಎಲ್ಲರ ಗಮನ ಸೆಳೆಯಿತು. ಅನಂತರ ನೃತ್ಯ ಗ್ರಾಮ ಪ್ರದೇಶದ ಹೆಸರ ಘಟ್ಟ ರೆಪರ್ಟರಿ ತಂಡದವರ ಬಯಲಾಟ, ನಾಟಕಗಳ ನಂತರ ಕಾರ್ಯಕ್ರಮ ಕೊನೆಗೊಂಡಿತು. ಶ್ರೀಮತಿ ಉಷಾ ರಾಧಾಕೃಷ್ಣ ಅವರು ಕಾರ್ಯಕ್ರಮದ ನಿರೂಪಣೆ ಮಾಡಿದರು.

ನೃತ್ಯ ಗ್ರಾಮದ ಸ್ಥಾಪಕಿ ಪ್ರತಿಮಾ ಗೌರಿ (ಮುಂಚಿನ ಪ್ರೊತಿಮಾ ಬೇಡಿ) ಸಭಿಕರನ್ನು ಸ್ವಾಗತಿಸಿ ನೃತ್ಯ ಗ್ರಾಮ ಹಮ್ಮಿಕೊಂಡಿರುವ ಯೋಜನೆಗಳನ್ನು ವಿವರಿಸಿದರು.


ಪ್ರತಿಮಾ ಗೌರಿ


ಪಂಡಿತ ಜಸ್‌ರಾಜ್

ಚಿತ್ರಗಳು : ಡಿ. ಸಿ. ನಾಗೇಶ್

# ಬದಲಾಗುವ ಅರ್ಥಗಳು

—ಗೀತಾ ಸೀತಾರಾಮ್

**ದಿನಕರ :**

ಮೂರು ಹಗಲು–ಮೂರು ಇರುಳು ! ನೆರೆಮನೆಯ ಊರ್ಮಿಳಾ ಉಸಿರು ಬಿಗಿ ಹಿಡಿದು ಮಾಧವನ ಸುದ್ದಿಗಾಗಿ ಕಾದಳು. ಪಾಕಿಸ್ತಾನದೊಂದಿಗೆ ನಡೆದಿರುವ ಭೀಕರ ಕಾಳಗದಲ್ಲಿ ಕಾಶ್ಮೀರದ ಗಡಿಯಲ್ಲಿದ್ದ ಮಾಧವ, ಅಪಾಯ ಪರಿಸ್ಥಿತಿಯಲ್ಲಿರುವನೆಂದು ಸುದ್ದಿ ಬಂದಾಗಲಿಂದ, ಅವನ ಬಾಲ್ಯ ಸ್ನೇಹಿತನಾದ ನನಗೇ ನಿದ್ದೆಯಿಲ್ಲ. ಇನ್ನು ಊರ್ಮಿಳಾಳ ಸ್ಥಿತಿ ಕೇಳಬೇಕೇ ? ಅವಳಿಗಾದರೋ ಯಾರಿದ್ದರು ? ಅನಾಥಾಶ್ರಮದಲ್ಲಿದ್ದ ಅವಳನ್ನು ಮೆಚ್ಚಿ ಮದುವೆಯಾದನೆಂಬ ತಪ್ಪಿಗೆ, ಮಾಧವನ ಹೆತ್ತವರೂ ದೂರಾಗಿದ್ದರು. ಮದುವೆಯಾದ ಮರುವರ್ಷದಲ್ಲಿ ಹುಟ್ಟಿದ ಶರತ್, ಇದೀಗ ಎರಡು ವರ್ಷದ ಮುದ್ದು ಬಾಲಕ. ಊರ್ಮಿಳಾ ಈಗ ಮತ್ತೆ ಬಸುರಿ. ಕಾಶ್ಮೀರಕ್ಕೆ ಹೊರಡುವ ಮುನ್ನ ನನ್ನ ಕೈ ಹಿಡಿದು 'ದಿನಕರ, ಈ ಬಾರಿ ಊರ್ಮಿಳಾಗೆ ಹೆಣ್ಣೇ ಆಗುತ್ತೆ ನೋಡು. ಅದು ನಮ್ಮಿಬ್ಬರ ಅಪೇಕ್ಷೆ ಕೂಡ. ಅವಳ ಹೆರಿಗೆಯ ಸಮಯಕ್ಕೆ ನಾನಿರುವುದಿಲ್ಲ ಎಂಬ ಬೇಸರವಿದ್ದರೂ, ನಿನ್ನಂಥ ಗೆಳೆಯನ ರಕ್ಷಣೆಯಲ್ಲಿ ಅವಳನ್ನು ಬಿಟ್ಟು ಹೋಗುತ್ತಿದ್ದೇನಲ್ಲಾ ಎಂಬುದೇ ನೆಮ್ಮದಿ. ಹಿರಿಯರಾಗಿ ನಿನ್ನ ತಾಯಿ ಇದ್ದಾರೆ. ನನ್ನ ಊರ್ಮಿಗೆ ಹೆರಿಗೆಯಾದ ತಕ್ಷಣ ನನಗೆ ಟೆಲಿಗ್ರಾಂ ಕೊಟ್ಟುಬಿಡು. ಸಾಧ್ಯವಾದಷ್ಟು ಬೇಗ ಬಂದುಬಿಡುತ್ತೇನೆ' ಎಂದಿದ್ದ ಮಾಧವ.

ಆದರೆ...ಆದದ್ದೇನು ! ಮೂರು ದಿನಗಳ ಉಸಿರುಕಟ್ಟುವ ವಾತಾವರಣದ ನಂತರ ಬಂತು ಆ ರಕ್ತ ಹೆಪ್ಪುಗಟ್ಟುವ ಸುದ್ದಿ...ಮಾಧವನ ಸಾವಿನ ಸುದ್ದಿ. ಸುದ್ದಿಯ ಸಿಡಿಲಿಗೆ ತರಗೆಲೆಯಂತೆ ತತ್ತರಿಸಿದ ಊರ್ಮಿಳಾ, ಪ್ರಜ್ಞಾಶೂನ್ಯಳಾದಾಗ ನಾನು–ಅಮ್ಮ ಕಂಗಾಲಾದೆವು. ಅವಳ ಮನಸ್ಸನ್ನು ಮೊದಲಿನ ಸ್ಥಿತಿಗೆ ತರಲು ನಾವು ನಮಗೆ ತಿಳಿದದ್ದನ್ನೆಲ್ಲಾ ಮಾಡಬೇಕಾಯಿತು. ಇಪ್ಪತ್ತೈದು ವಸಂತಗಳನ್ನು ಮಾತ್ರ ಕಳೆದ ಅವಳ ಮುಂದೆ ನೀಳ–ಕರಾಳ ಭವಿಷ್ಯವೊಂದಿದೆ. ಅದನ್ನೆದುರಿಸುವ ಶಕ್ತಿ ಅವಳಿಗಿದೆಯೋ ಎಂಬುದು ನನ್ನ ಆತಂಕವಾಗಿತ್ತು. ಆದರೆ ಊರ್ಮಿಳಾ ನಿಜಕ್ಕೂ ಗಟ್ಟಿ ಹೃದಯದ ದಿಟ್ಟ ಹೆಣ್ಣೇ ಸರಿ. ಮಾಧವನೊಡನೆ ಕಳೆದ ಮೂರು ವರ್ಷಗಳ ಮಧುರ ಸ್ಮೃತಿಯ ಭದ್ರ ಬುನಾದಿಯ ಮೇಲೆ ಅವಳು ಬದುಕಿನ ಬಂಗಲೆಯನ್ನೇ ಕಟ್ಟುವ ನಿರ್ಧಾರ ಮಾಡಿದ್ದಾಳೆ.

ನನಗೆ ತಿಳಿದವರ ಬಳಿ ಶಿಫಾರಸು ಮಾಡಿ ಅವಳಿಗೊಂದು ಗೌರವಾನ್ವಿತ ನೌಕರಿ ಕೊಡಿಸಿದೆ. ಮಾಧವನ ಮರಣಕ್ಕೆ ಆಗಲೇ ಆರು ತಿಂಗಳಾಯಿತು. ಇನ್ನೊಂದು ತಿಂಗಳಿಗೆ ಊರ್ಮಿಳಾಳ ಹೆರಿಗೆಯ ಸಮಯ. ಅಮ್ಮನ ನೆರವಿನಿಂದ ಹೇಗೋ ಎಲ್ಲಾ ಸುಸೂತ್ರ ನಡೆಸಬೇಕು. ಮಾಧವ ನನ್ನಲ್ಲಿಟ್ಟ ವಿಶ್ವಾಸಕ್ಕೆ ನನ್ನಿಂದಾದ ನೆರವು ನೀಡಬೇಕು.

ನಿನ್ನೆಯ ದಿನ, ಊಟವಾದ ಮೇಲೆ, ಅಮ್ಮ ನನ್ನ ಬೆನ್ನ ಮೇಲೆ ಕೈಯಿಟ್ಟು 'ದಿನೂ, ನಾನೊಂದು ಮಾತು ಹೇಳಲೇ' ಎಂದಳು. ಅಮ್ಮನ ಈ ಪೀಠಿಕೆಗೆ ಕಾರಣ ತಿಳಿಯದೆ 'ಹೇಳಮ್ಮ' ಎಂದೆ. ಅವಳೆಂದಳು 'ನೋಡು ಮಗೂ, ಈ ಪ್ರಪಂಚ ತೀರಾ ಕೆಟ್ಟಿದ್ದು. ಒಂಟಿ ಹೆಣ್ಣಿನ ಬದುಕು ದುರ್ಭರ. ನಿನ್ನ ಸ್ನೇಹಿತನಿಗಾಗಿ, ನೀನು ಊರ್ಮಿಳೆಯನ್ನು ಮದುವೆಯಾದರೆ ಅವಳಿಗೊಂದು ಆಸರೆಯಾದೀತು. ನಿನ್ನ ಮದುವೆಯಾದರೆ, ನನ್ನ ಕನಸೂ ನನಸಾದೀತು.' ನಾನು ಬೆಚ್ಚಿದೆ ! ಮೂರು ದಶಕಗಳನ್ನು ದಾಟಿದ್ದರೂ, ಅದೇಕೋ ನನಗೆ ಮದುವೆಯ ಬಗ್ಗೆ ಆಸೆಯಾಗಲೀ–ಆಸಕ್ತಿಯಾಗಲೀ ಮೂಡಿಬಂದಿರಲಿಲ್ಲ. ಮದುವೆ ನನ್ನ ಪಾಲಿಗೊಂದು ಅರ್ಥಹೀನ ಶಬ್ದ ಎನಿಸಿತ್ತು. ಹಾಗೆಂದು, ನಾನು ಹೆಣ್ಣಿನ ಹೃದಯದ ನೋವು–ನಲಿವಿಗೆ ಸ್ಪಂದಿಸದಷ್ಟು ಹೃದಯಹೀನನಾಗಿರಲಿಲ್ಲ. ಆದರೂ ಅಮ್ಮನ ಈ ಸಲಹೆ ನನ್ನನ್ನು ಬೆಚ್ಚುವಂತೆ ಮಾಡಿತು. ಸಂಪ್ರದಾಯಶೀಲ ಮನೆತನದ ಅಮ್ಮನ ಬಾಯಲ್ಲಿ ವಿಧವಾ ವಿವಾಹದ ಪ್ರಸ್ತಾಪ ಕೇಳಿ ಅಚ್ಚರಿಯೂ ಆಯ್ತು.

ಆದರೂ ನನ್ನ ಪ್ರಿಯಮಿತ್ರನ ಪತ್ನಿಯನ್ನು ಪೂಜನೀಯ ಸ್ಥಾನದಲ್ಲಿಟ್ಟ ನನಗೆ, ಅಮ್ಮನ ಕೋರಿಕೆಯನ್ನು ಈಡೇರಿಸುವುದು ಕಷ್ಟ ಎನಿಸಿತು. ಅಮ್ಮನ ಹಸ್ತಗಳನ್ನು ನನ್ನದರಲ್ಲಿ ತೆಗೆದುಕೊಂಡು 'ಅಮ್ಮಾ, ನನ್ನ ಧ್ಯೇಯ ಭಾವನೆಗಳನ್ನು ಒಮ್ಮೆಲೇ ಬದಲಿಸಿಕೊಳ್ಳೋದು ನನಗೆ ಕಷ್ಟ ಎನಿಸುತ್ತೆ. ಅವಳಿಗೂ ಮಾಧವನ ನೆನಪು ಇನ್ನೂ ಹಸಿರಾಗಿರುವಾಗ ನಾವು ಈ ರೀತಿ ಸಲಹೆ ನೀಡೋದು ಸರಿಯಲ್ಲ. ಕಾಲದ ಮುಲಾಮಿನಿಂದ ಅವಳ ಹೃದಯದ ಹುಣ್ಣು ಮಾಗಲಿ. ಆಮೇಲೆ ಎಂದಾದರೂ ನನಗೆ ಸರಿಯೆಂದು ತೋರಿದಾಗ ಈ ಬಗ್ಗೆ ಪ್ರಸ್ತಾಪಿಸೋಣ. ಈಗ ಬೇಡ' ಎಂದೆ. ಅಮ್ಮ ಏನೊಂದೂ ಮಾತನಾಡದೆ ನನ್ನ ತಲೆ ನೇವರಿಸಿ ಹೋದಳು.

**ಊರ್ಮಿಳಾ :**

ಮಡಿಲ ತುಂಬಾ ತುಂಬಿಕೊಂಡ ಮುದ್ದಾದ ಮಗು. ಮಾಧವನ ಆಸೆಯಂತೆಯೇ ಹೆಣ್ಣು ; ಅವನದೇ ತದ್ರೂಪು. ಶರತ್‌ಗಂತೂ ಮಗುವಿನ ಪುಟ್ಟ ಕೈ-ಕಾಲುಗಳನ್ನು ನೇವರಿಸುವುದರಲ್ಲೇ ಖುಷಿ. ತಂದೆಯು ಇನ್ನಿಲ್ಲ ಎಂಬ ಕಠೋರ ಸತ್ಯವನ್ನೂ ಅರಿಯಲಾಗದ ಹಸುಳೆ ಮನಸ್ಸು. ತಂಗಿ ಬಂದ ಸಂಭ್ರಮದಲ್ಲಿ, ತಂದೆಯ ಸಾವನ್ನೂ ಮರೆತಿದ್ದಾನೆ. ಅದು ಅವನ ವಯಸ್ಸು. ಆದರೆ ನಾನೋ ! ಎದೆಯಾಳದಲ್ಲಿ ಹುದುಗಿರುವ ಮಾಧವನ ನೆನಪು ಒಮ್ಮೊಮ್ಮೆ ಭೋರ್ಗರೆವ ಅಲೆಯಂತೆ ನುಗ್ಗಿ ಬರುತ್ತದೆ. ನನ್ನ ಸ್ಥೈರ್ಯವನ್ನೆಲ್ಲಾ, ಪ್ರಿಯ ವಿಯೋಗದ ವಿಷಮತೆ, ಅಲುಗಾಡಿಸುತ್ತದೆ !

ಆ ದುರ್ಭರ ದಿನಗಳಲ್ಲಿ ನೆರೆಮನೆಯ ದಿನಕರ, ಅವರ ತಾಯಿ ಶಾಂತಮ್ಮ ನನಗದೆಷ್ಟು ನೆರವಾದರು ! ಅವರಿಲ್ಲದಿದ್ದರೆ ಮಾಧವನ ಮರಣದಿಂದ ನಾನಿನ್ನೂ ಅಧೀರಳಾಗಿಬಿಡುತ್ತಿದ್ದೆ. ಪಾಪ ! ಮಿತ್ರರಾಗಿ, ಮಾಧವನ ಅಂತ್ಯಸಂಸ್ಕಾರವನ್ನೂ ಅವರೇ ಮಾಡಬೇಕಾಯ್ತು ! ಅವರ ದಯದಿಂದ ಒಳ್ಳೆಯ ಕೆಲಸವೂ ಸಿಕ್ಕಿತು. ನಾನು ಶರಣ್ಯಳನ್ನು ಹೆತ್ತಾಗ ಶರತ್‌ನ ಜವಾಬ್ದಾರಿ...ಆಸ್ಪತ್ರೆಯ ಓಡಾಟ ಎಲ್ಲಾ ದಿನಕರ–ಶಾಂತಮ್ಮ ಅವರದ್ದೇ. ಅವರ ಋಣ ನಾನೀ ಜನ್ಮದಲ್ಲಿ ತೀರಿಸಲು ಅಸಾಧ್ಯ.

ಈಗಲೂ ನಾನು ಕೆಲಸಕ್ಕೆ ಹೋಗುವಾಗ ಮಕ್ಕಳ ಜವಾಬ್ದಾರಿ ಶಾಂತಮ್ಮನ ಪಾಲಿಗೇ. ಜೊತೆಗೆ ನೆರವಿಗೆಂದು ಕೆಲಸದ ಹುಡುಗಿಯೊಬ್ಬಳನ್ನು ಗೊತ್ತು ಮಾಡಿದ್ದೇನೆ. ಶರತ್‌ಗಂತೂ ದಿನಕರ್ ಅಂಕಲ್ ಎಂದರೆ ಪಂಚಪ್ರಾಣ. ದಿನಕರ ಆಫೀಸಿನಿಂದ ಬಂದದ್ದೇ ತಡ ತೊಡೆಯೇರಿ ಕುಳಿತುಬಿಡುತ್ತಾನೆ. ರಾತ್ರಿ ಊಟ, ಊಟವಾದ ಮೇಲೆ ಕಥೆ. ಎಲ್ಲಾ ಅವರೊಂದಿಗೇ. ನಿದ್ದೆಗೆ ಮಾತ್ರ ಅವನಿಗೆ ನನ್ನ ಜೊತೆಯೇ ಬೇಕು. ನಾನು ಶರಣ್ಯಳಿಗೆ ಹಾಡುವ ಲಾಲಿ ಕೇಳುತ್ತಾ ನನ್ನ ತೊಡೆಯ ಮೇಲೆ ತಲೆಯಿಟ್ಟು ಮಲಗಿದಾಗಲೇ ಅವನಿಗೆ ನಿದ್ದೆ ಬರುವುದು.

ಮಾಧವನ ಪ್ರೀತಿ–ಅವನ ಸ್ಪರ್ಶ-ಅವನ ಸಾಂಗತ್ಯ ಎಲ್ಲವನ್ನೂ ಬರಿಯ ಸ್ಮೃತಿಯಾಗಿಸಿ ನನ್ನ ಬದುಕನ್ನು ಅರ್ಥಹೀನವಾಗಿಸಿತು ವಿಧಿ. ಆದರೀಗ ಈ ನಿರ್ಜೀವ ಬದುಕನ್ನು ಅರ್ಥಪೂರ್ಣವಾಗಿಸಿದ್ದಾರೆ ಶರತ್–ಶರಣ್ಯಾ. ಅವರ ಮುದ್ದು-ಲಲ್ಲೆ-ನಗು-ನಲಿವಿನಲ್ಲಿ ನಾನು ಹೊಸಬಳಾಗಿದ್ದೇನೆ. ಹಳತನ್ನು ಮರೆಯುತ್ತಿದ್ದೇನೆ. ಸ್ಫೂರ್ತಿಯಿಂದ ಬದುಕಲು ಯತ್ನಿಸುತ್ತಿದ್ದೇನೆ.

•

**ಶರತ್ :**

ಈವತ್ತು ಅಮ್ಮನ ಮೂವತ್ತೈದನೆಯ ಹುಟ್ಟು ಹಬ್ಬ. ನಾನೂ-ಶರಣ್ಯಾಳೂ, ಅಮ್ಮನಿಗೆ ಕೊಡಲೆಂದು, ಹೊಸ ರೀತಿಯ ಉಡುಗೊರೆಯೊಂದನ್ನು ತಯಾರು ಮಾಡಿದೆವು. ಶರಣ್ಯಾ ದಾರಗಳನ್ನು




ಬಣ್ಣಗಳಲ್ಲಿ ಅದ್ದಿ ಅತ್ಯಂತ ಆಕರ್ಷಕವಾದ ಗ್ರೀಟಿಂಗ್ಸ್ ಒಂದನ್ನು ಮಾಡಿದಳು. ನಾನು ಅದರೊಳಗೆ 'ಅಮ್ಮನಿಗೊಂದು ಕಾಣಿಕೆ' ಎನ್ನುವ ಹದಿನಾರು ಸಾಲುಗಳ ಪದ್ಯವನ್ನು ಬರೆದಿಟ್ಟೆ.

'ಗ್ರೀಟಿಂಗ್ ಕಾರ್ಡ್'ನ್ನು ಅಮ್ಮನಿಗೆ ಕೊಟ್ಟಾಗ ಅವಳ ಮುಖದಲ್ಲಿನ ಆನಂದ...ಓಹ್ ! ವರ್ಣನಾತೀತ ! ತಕ್ಷಣವೇ ನನ್ನನ್ನೂ-ಶರಣ್ಯಳನ್ನೂ ಬಿಗಿದಪ್ಪಿ ಒಂದೇ ಉಸುರಿಗೆ ಮುದ್ದಿಸಿದಳು...ಉನ್ಮತ್ತಳಂತೆ. ಪಕ್ಕದ ಮನೆಗೆ ಹೋಗಿ ದಿನಕರ್ ಅಂಕಲ್‌ಗೆ ಉಡುಗೊರೆಯನ್ನು ತೋರಿಸಿದಳು. ಅಂಕಲ್ ನನ್ನ ಪದ್ಯವನ್ನು ರಾಗವಾಗಿ ಓದಿದಾಗ ನನಗಂತೂ ಹೆಮ್ಮೆಯೋ ಹೆಮ್ಮೆ:

'ನಾನೆಲ್ಲೇ ದೂರ ಹೋದರೂ
ನನ್ನೆದೆಯ ಒಳಗೆ ಇರುವಳು ;
ನನ್ನುಸಿರ ಹಿಂದೆ ಅವಳೇ ಶಕ್ತಿ
ಎನಿಸೆ-ಎಷ್ಟು ಒಲವು-ಭಕ್ತಿ-!'

ಕಡೆಯ ಈ ನಾಲ್ಕು ಸಾಲುಗಳನ್ನು ಎರಡೆರಡು ಬಾರಿ ಓದಿ, ಅಂಕಲ್, ಅಮ್ಮನ ಕಡೆ ನೋಡಿ, ಕನ್ನಡಕ ತೆಗೆದು ಕಣ್ಣೊರೆಸಿಕೊಂಡರು. ಪದ್ಯ ಕೇಳುತ್ತಿದ್ದ ಶಾಂತಜ್ಜಿ ನನ್ನನ್ನು ತಬ್ಬಿಕೊಂಡು 'ನೂರ್ಕಾಲ ಚೆನ್ನಾಗಿರು ನನ್ನ ಚಿನ್ನ, ಅಪ್ಪ-ಅಮ್ಮನ, ಹೆಸರು ಮುಂದಕ್ಕೆ ತರೋ ಮಕ್ಳು, ಹುಟ್ಟಿದ್ದಕ್ಕೂ ಸಾರ್ಥಕ' ಅಂದ್ರು. ಮತ್ತೆ ಒಳಗ್ಹೋಗಿ ಹಿಡಿ ಉಪ್ಪು ತಂದು ದೃಷ್ಟಿ ತೆಗೆದು ಬಾವಿಗೆ ಹಾಕಿದರು. ಓಹ್ ! ಅಮ್ಮ, ಅಂಕಲ್, ಶಾಂತಜ್ಜಿ ಎಲ್ಲಾ ನನ್ನನ್ನು ಎಷ್ಟೊಂದು ಪ್ರೀತಿಸ್ತಾರೆ. ನನ್ನ ಅಪ್ಪ ಇಲ್ಲದ ಕೊರಗು ನಮಗೆ ತಟ್ಟದ ಹಾಗೆ, ಅಮ್ಮ ನನ್ನನ್ನು ಎಷ್ಟು ಚೆನ್ನಾಗಿ ನೋಡಿಕೊಳ್ತಾಳೆ. ನಾನೂ ದೊಡ್ಡವನಾಗಿ ತುಂಬಾ

ಓದಿ, ಒಳ್ಳೇ ಕೆಲಸಕ್ಕೆ ಸೇರಿ ಅಮ್ಮನನ್ನು ಸುಖವಾಗಿ ಇಟ್ಟುಕೊಳ್ಳಬೇಕು. ಅವಳು ಅಪ್ಪನ ನೆನಪಿನಲ್ಲಿ ಅಳಲೇ ಬಾರ್ದು-ಹಾಗೆ ನೋಡಿಕೊಳ್ಳ ಬೇಕು ಅವಳನ್ನು !

**ಶರಣ್ಯಾ :**

ಇಂಗ್ಲೀಷ್ ಕ್ಲಾಸಿನಲ್ಲಿ ಅವತ್ತು ಟೀಚರ್ 'ಪಾಸ್ತುಮಸ್ ಚೈಲ್ಡ್' (Posthumous child) ಅಂದ್ರೆ ಏನೂಂತ ಹೇಳುತ್ತಿದ್ರು. ತಂದೆ ಸತ್ತ ಮೇಲೆ ಹುಟ್ಟೋ ಮಕ್ಕಳನ್ನು ಹಾಗೆ ಕರೀತಾರೆ, ಅಂತ ಹೇಳಿದಾಗ ನನಗ್ಯಾಕೋ ಗಂಟಲಲ್ಲಿ ಒತ್ತರಿಸಿಕೊಂಡು ಬಂತು. ನಾನೂ ಅದೇ ಅಲ್ವಾ? ಅದಕ್ಕೆ ಶಾಂತಜ್ಜೀನ' ಪಪ್ಪಾ ಹೇಗಿದ್ರು ?' ಅಂತ ಕೇಳಿದ್ದಕ್ಕೆ ಅವತ್ತು ಹೇಳಿದರು ಎಲ್ಲಾ ನಿನ್ಹಾಗೇ ಇದ್ದ. ಗುಂಗುರು ಕೂದಲು... ತಿದ್ದಿದ ಹುಬ್ಬು, ಬಟ್ಟಲುಗಣ್ಣು, ಉದ್ದನೆ ಮೂಗು, ಗುಳಿಬೀಳೋ ಕೆನ್ನೆ, ನಿಮ್ಮಪ್ಪನ ಪಡಿಯಚ್ಚು ನೀನು. ಅದನ್ನು ನೋಡೋ ಭಾಗ್ಯ ಅವನ್ನ ಹಣೇಲಿ ಬರ್ದಿರ್‍ಲಿಲ್ಲ. ಭಗವಂತ ನೀನು ಹುಟ್ಟೋಕೆ ಮುಂಚೇನೇ ಅವನ್ನ ಕರ್‍ಕೊಂಡ್ಬಿಟ್ಟ. 'ಏನೋ, ಅವನ ನೆನಪಿಗೆ ನಿನ್ನನ್ನಾದ್ರೂ ಕೊಟ್ಟಿದ್ದಾನಲ್ಲಾ ನಿಮ್ಮಮ್ಮಂಗೆ.' ಅದಕ್ಕೆ ಇರಬೇಕು ಅಮ್ಮನಿಗೆ ನನ್ನನ್ನು ಕಂಡ್ರೆ ಅಷ್ಟು ಮುದ್ದು. ಶರತ್‌ಗಾದ್ರೂ ಏನಾದರೂ ತಪ್ಪು ಮಾಡಿದ್ರೆ ಬಯ್ತಾರೆ. ನನ್ನನ್ನ ಮಾತ್ರ ಯಾವತ್ತೂ ಬಯ್ಯುವುದೇ ಇಲ್ಲ.

ಈವತ್ತು ಸರಿತಾ ಹೇಳ್ತಿದ್ಲು ಪಾಪ ! ಅವಳ ತಂದೆ ತಾಯಿ ಅವಳನ್ನು ಸರಿಯಾಗಿ ನೋಡಿಕೊಳ್ಳೋದೇ ಇಲ್ವಂತೆ. ಅವಳ ತಾಯಿ ಸತ್ತ ಮೇಲೆ ಸರಿತಾಳ ತಂದೆ ಇನ್ನೊಬ್ಬರು ಮಮ್ಮೀನ ಕರೆತಂದಿದ್ದಾರಂತೆ. ಅವರಂತೂ ಸರಿತಾಳನ್ನು ಸ್ವಲ್ಪವೂ ಪ್ರೀತಿಸುವುದಿಲ್ಲವಂತೆ. ಸರಿತಾಳ ತಂದೆಯೂ ಈಗೀಗ ಯಾವಾಗಲೂ ಹೊರಗೇ ಇದ್ದು ಬಿಡುತ್ತಾರಂತೆ. ಸರಿತಾಳನ್ನು ಮೊದಲಿನ ತರಹ ಮುದ್ದಿಸೋದೇ ಇಲ್ಲವಂತೆ. ಎಲ್ಲಾ ಹೇಳ್ಕೊಂಡು ಅವಳು ಅತ್ತಾಗ ನನಗೂ ಅಳು ಬಂತು.

ಸದ್ಯ ! ನನ್ನ ಅಮ್ಮ ಎಷ್ಟು ಒಳ್ಳೆಯವಳು ! ಸರಿತಾ ತಂದೆ ತರಹ, ನನ್ನ ಅಮ್ಮನೂ ಇನ್ನೊಂದು ಪಪ್ಪಾನ ತಂದುಬಿಡಲಿಲ್ಲವಲ್ಲಾ ! 'ಓಹ್ ! ನನ್ನಮ್ಮ ! ಎಷ್ಟು ಒಳ್ಳೆಯ ಅಮ್ಮ ! ಸಂತಸದ ಗುಂಗು ಲಗ್ಗೆ ಹಾಕಿದಾಗ, ಅದೇ ಭರದಲ್ಲಿ ಓಡಿ ಹೋಗಿ ಅಮ್ಮನ ಕೊರಳಸುತ್ತ ಕೈ ಹಾಕಿ ತಬ್ಬಿಕೊಂಡು, ಎರಡು ಕೆನ್ನೆಗಳಿಗೂ ಮತ್ತೆ ಮತ್ತೆ ಮುದ್ದಿಟ್ಟೆ. ಆವ್ಮಾ ಅಂದಳು 'ಶರಣ್, ಈ ವರ್ಷ ಎಸ್. ಎಸ್. ಎಲ್. ಸಿ. ಮುಗಿಸ್ತಿದೀ. ಇನ್ನೂ ಹುಡುಗಾಟ ಬಿಟ್ಟಿಲ್ಲಲ್ಲೇ ಚಿನ್ನ' ಅದಕ್ಕೆ ನಾನಂದೆ 'ಹೋಗಮ್ಮ ಶರತ್ ಪಿ. ಯು. ಸಿ. ಮುಗಿಸೋ ಹೊತ್ತಿಗೇ ದೊಡ್ಡ ಪ್ರೊಫೆಸರ್ ತರಹ ಗಂಭೀರವಾಗಿ ಬಿಟ್ಟಿದ್ದಾನೆ. ನನಗೆ ಹಾಗಿರೋಕ್ಕೆ ಇಷ್ಟ ಇಲ್ಲ. ನಾನು ಹೀಗೇ ಇರ್‍ತೀನಿ.' ಅಮ್ಮ ಮುದ್ದಾಗಿ ನಕ್ಕು ನನ್ನ ಕೆನ್ನೆ ಚಿವುಟಿದಳು.

**ದಿನಕರ :**

ಕಾಲಚಕ್ರ ಉರುಳುತ್ತಿರುವುದೇ ತಿಳಿಯದಷ್ಟು ಬೇಗ ಮಕ್ಕಳು ದೊಡ್ಡವರಾಗಿ ಬಿಟ್ಟಿದ್ದಾರೆ. ಶರತ್ ಪಿ. ಯು. ಸಿ. ಮುಗಿಸಿ ಎಂಜಿನಿಯರಿಂಗ್ ಕಾಲೇಜಿಗೆ ಸೇರಿದ್ದಾನೆ. ಶರಣ್ಯಾ ಪಿ. ಯು. ಸಿ. ಓದುತ್ತಿದ್ದಾಳೆ. ಅವಳಿಗೆ ಡಾಕ್ಟರಾಗುವ ಬಯಕೆ. ನಿಯತ್ತಿನ ದುಡಿಮೆಯಿಂದ ಊರ್ಮಿಳಾಗೆ ಪ್ರಮೋಷನ್ ದೊರೆತು ಇದೀಗ ಅವಳ ವರ್ಗಕ್ಕೆ 'ಸೆಕ್ಷನ್' ಆಫೀಸರಳಾಗಿದ್ದಾಳೆ. 'ಎಲ್ಲಾ ನಿಮ್ಮ ದಯದಿಂದ' ಎನ್ನುವುದು ಅವಳ ಪಲ್ಲವಿ. ಇದೀಗ ನನ್ನ ಮದುವೆಗೆ ಅಮ್ಮನ ಒತ್ತಾಯ ಅತಿಯಾಗಲು, ನಾನೇ ಊರ್ಮಿಳಾಳನ್ನು ಈ ಬಗ್ಗೆ ಕೇಳೋಣ ಎಂದು ನಿರ್ಧರಿಸಿದೆ.

ಆ ದಿನ ಅಮ್ಮ ದೇವಸ್ಥಾನಕ್ಕೆ ಹೋಗಿದ್ದಳು. ಶರಣ್ಯಾ ಗೆಳತಿಯ ಮನೆಗೆ ಹೋಗಿದ್ದಳು. ಊರ್ಮಿಳಾ ಆಫೀಸಿನಿಂದ ಬಂದದ್ದು ಕಂಡು ನಾನೇ ಹಾಲಿನ ಪಾತ್ರೆ ತೆಗೆದುಕೊಂಡು ಅವರ ಮನೆಗೆ ಹೋದೆ. ಮೊದಲೇ ನಿರ್ಧಾರ ಮಾಡಿಕೊಂಡಂತೆ ಮಾತನಾಡಿದೆ. 'ಊರ್ಮಿಳಾ, ಮದುವೆಯಾಗದೆಯೇ ಉಳಿಯಬೇಕೆಂಬ ನನ್ನ ನಿರ್ಧಾರ ಇದೀಗ ಬದಲಾಗಿದೆ. ನನ್ನ ಬದುಕಿಗೊಂದು ಅರ್ಥ ಬೇಕು ಎನಿಸಿದ್ದರಿಂದ ನಿನ್ನನ್ನು ಕೇಳಿಕೊಳ್ಳುತ್ತಿದ್ದೇನೆ. ನೀನು ಒಪ್ಪುವುದೇ ಆದರೆ, ನಾನು ನಿನ್ನನ್ನು ಮದುವೆಯಾಗುತ್ತೇನೆ. ಇದಕ್ಕೆ ಶರತ್-ಶರಣ್ಯಾರ ಒಪ್ಪಿಗೆ ಅವಶ್ಯ. ಮಾಧವನ ಮರಣದ ನಂತರ ಅಮ್ಮ ನನ್ನಲ್ಲಿ ಈ ವಿಷಯ ಪ್ರಸ್ತಾಪ ಮಾಡಿದಳು. ಆದರೆ ನಾನೇ ಒಪ್ಪಲಿಲ್ಲ. ಆಗ ನಿನ್ನ ಮನಸ್ಸೂ ನೊಂದಿತ್ತು. ನನಗೂ ಮದುವೆಯಾಗುವ ಅಭಿಪ್ರಾಯವಿರಲಿಲ್ಲ. ಇದೀಗ ಮಕ್ಕಳು ಒಂದು ಹಂತಕ್ಕೆ ಬಂದಿದ್ದಾರೆ. ತಮ್ಮ ಇಷ್ಟಾನಿಷ್ಟಗಳನ್ನು ಹೇಳುವಂತಾಗಿದ್ದಾರೆ. ಅವರ ಭವಿಷ್ಯಕ್ಕೆ ನಮ್ಮ ಈ ಮದುವೆಯಿಂದ ತೊಂದರೆಯಿಲ್ಲ ಎಂದು ಅವರು ಭಾವಿಸುವುದೇ ಆದರೆ, ನಾನು ಸಿದ್ಧ.'

ಊರ್ಮಿಳಾ ಬೆಚ್ಚಿದಂತೆ ಕಂಡಿತು. ನಂತರ ಸಾವರಿಸಿಕೊಂಡು ಹೇಳಿದಳು. "ದಿನಕರ, ನೀವು ನನಗೆ ಮಾಡಿರುವ ಉಪಕಾರಕ್ಕೆ ನಾನು ಏನು ಕೊಟ್ಟರೂ ಅಲ್ಪವೇ ! ಆದರೆ ನಾನೊಂದು ವರ್ತುಲವನ್ನು ನನ್ನ ಸುತ್ತ ಹಾಕಿಕೊಂಡು ಬಿಟ್ಟಿದ್ದೀನಿ. ಮಾಧವನ ನೆನಪಿನ ರಕ್ಷೆಯಲ್ಲಿ, ಈ ವರ್ತುಲದಿಂದ ಈಚೆ ಬರುವ ಯತ್ನ ಮಾಡಿಲ್ಲ. ಹಾಗೆ ಹೊರಬಂದು ಒಪ್ಪಿಗೆ ನೀಡಿದರೂ, ಅದು ನಿಮಗಾಗಿಯೇ ವಿನಃ, ನನಗಾಗಿ ಅಲ್ಲ. ನೀವೇ ಹೇಳಿದಂತೆ ನಿಮ್ಮ ಬದುಕಿಗೊಂದು ಅರ್ಥ ಹುಡುಕುತ್ತಿದ್ದೀರಿ. ಅದನ್ನು ನಾನು ಒಲ್ಲೆ ಎಂದರೆ, ಬೇರೊಬ್ಬ ಹೆಣ್ಣಲ್ಲೂ ಕಾಣಬಹುದು ನೀವು. ಆದರೆ ನಾನಾಗಲೇ ಬದುಕಿನ ಅರ್ಥ ಕಂಡುಕೊಂಡಿದ್ದೇನೆ. ಇದೀಗ ಮಾಧವನನ್ನು ಅಗಲಿ ಹದಿನೈದು ವರ್ಷಗಳೇ ಆದವು. ಇಷ್ಟು ವರ್ಷಗಳನ್ನು ದಾಟಿದ ನಾನು, ಇನ್ನಷ್ಟು ವರ್ಷಗಳನ್ನೂ ಹೀಗೇ ದಾಟಲಾರನೆ ? ಮಕ್ಕಳ ಭವಿಷ್ಯ ನನ್ನೀ ತ್ಯಾಗದಿಂದ ಉಜ್ವಲವಾಗುವುದಾದರೆ ನಾನೇಕೆ ಸ್ವಾರ್ಥಿಯಾಗಬೇಕು ? ನಿಮ್ಮ ಸ್ನೇಹ ಮಾಧವನಿದ್ದಾಗಲೂ ಇತ್ತು. ಇಂದೂ ಇದೆ ಮುಂದೂ ಇರುತ್ತದೆ. ಆದರೆ ಮಕ್ಕಳಿಗೆ ನೀವು 'ಅಂಕಲ್' ಆಗಿಯೇ ಉಳಿಯುವುದು ಚೆನ್ನ ಎಂದು ನನ್ನ ಎಣಿಕೆ. ನನ್ನಂತಹ ಭಾಗ್ಯಹೀನಳಿಗೆ, ಮುತ್ತೈದೆಯ ಸ್ಥಾನ ನೀಡುವಷ್ಟು ಹಿರಿಯ ಗುಣ ನಿಮಗಿದೆ. ಇದಕ್ಕಾಗಿ ನಿಮಗೆ ನಾನು ಸದಾ ಋಣಿ. ಆದರೆ ಆ ಪುಣ್ಯ ನನ್ನ ಭಾಗಕ್ಕಿಲ್ಲ ದಿನಕರ್. ನನ್ನ ಮಾತಿನಿಂದ ನಿಮ್ಮ ಮನಸ್ಸಿಗೆ ನೋವಾಗಿದ್ದರೆ ಕ್ಷಮಿಸಿ ದಿನಕರ್" ಮೊದಲ ಬಾರಿಗೆ ನನ್ನ ಹಸ್ತಗಳನ್ನು ಹಿಡಿದು ಕಣ್ಣಿಗೊತ್ತಿಕೊಂಡಳು ಊರ್ಮಿಳಾ. ಅವಳ ಕಣ್ಣಿನಿಂದುದುರಿದ ಅಶ್ರುಬಿಂದುಗಳು ನನ್ನ ಹಸ್ತದಂತೆಯೇ, ಹೃದಯವನ್ನೂ ತೋಯಿಸಿತು. ಅವಳ ವಜ್ರಸಮ ವ್ಯಕ್ತಿತ್ವದೆದುರು ನಾನು ಮೂಕನಾದೆ.

**ಊರ್ಮಿಳಾ :**

ಶರಣ್ಯ ಮಣಿಪಾಲದ ಮೆಡಿಕಲ್ ಕಾಲೇಜಿಗೆ ಸೇರುವುದು ನನಗೇನೂ ಅಭಿಪ್ರಾಯವಿರಲಿಲ್ಲ. ಆದರೆ ಅವಳದ್ದು ತಂದೆಯಂತೆಯೇ ಹಠದ ಸ್ವಭಾವ. ಅದಕ್ಕೆ ದಿನಕರರ ವಕಾಲತ್ತು ಬೇರೆ. ಹೀಗಾಗಿ ಶರಣ್ಯಾ ಹೊರಟಳು. ಹಾಸ್ಟೆಲ್ ಜೀವನಕ್ಕೆ ಒಗ್ಗಿಕೊಂಡೂ ಬಿಟ್ಟಳು. ಪ್ರಾರಂಭದಲ್ಲಿ ಮನೆಯಿಂದ ದೂರ ಹೋದೆ ಎಂದು ಪೇಚಾಡುತ್ತಿದ್ದವಳು. ಆರು ವರ್ಷಗಳ ಈ ಅವಧಿಯಲ್ಲಿ ಬಹಳವೇ ಬದಲಾಗಿದ್ದಾಳೆ. ಹೋದ ರಜೆಯಲ್ಲಿ ಇಲ್ಲಿಗೆ ಬಂದಾಗಲಂತೂ ಅವಳ ಚಹರೆ, ನಡೆ-ನುಡಿ ಎಲ್ಲಾ ಹೊಸಬಳಂತೆಯೇ ಆಗಿತ್ತು. ಮೊದಲಿನಂತೆ ಎಲ್ಲದಕ್ಕೂ 'ಅಮ್ಮ, ಅಮ್ಮ' ಎಂದು ನನ್ನ ಹಿಂದೆ ಸುತ್ತಲಿಲ್ಲ.

ಇಲ್ಲಿರುವಷ್ಟು ದಿನವೂ ಚಡಪಡಿಸುತ್ತಾ, ರಜೆ ಮುಗಿದೊಡನೆ ಹಕ್ಕಿಯಂತೆ ಹಾರಿದಳು. ಏಕೆ ಈ ಬದಲಾವಣೆ ? ನನ್ನ ಅವಳ ಸಂಬಂಧದಲ್ಲಿ ಎಲ್ಲಿ

## ಹರಕೆಯ–ಕುರಿ

ನಮ್ಮಪ್ಪನ ಹರಕೆಯಿಂದ
ನಾನಿಂದು ಮಾಡಲೇಬೇಕು
ಬೆತ್ತಲೆ ಸೇವೆ,
ಉಧೋ–ಉಧೋ ಎಂದು
ಉಟ್ಟಿದ್ದನೆಲ್ಲಾ ಕಳಚಿ
ನಮ್ಮನ್ನಟ್ಟಿ ಬರುವ ಕಂಗಳ
ಹಸಿವೆಗೆ ನಾ ಬಲಿಯಾಗಿ
ಹರಕೆಯ ಹೆಸರಲಿ ಇಂದು
ನೋಡುವವರಿಗೆ ತೋರಿಸಬೇಕು
ನನ್ನ ಯೌವ್ವನದ ಮೈಮಾಟ
ನನ್ನ ಜೊತೆಗೆ ನನ್ನಂತವರೇ,
ಉಧೋ–ಉಧೋ ಎಂದು
ಬರುವಾಗ,
ಆ ತಾಯಿ ಎಲ್ಲವ್ವ
ಹಸಿರು ಬಳೆ–ಸೀರೆಯಲಿ
ಅಲಂಕಾರವಾಗಿ ಕುಳಿತಿರುವಾಗ
ನಾವೇಕೆ ಬೆತ್ತಲೆ ಇಂದು ?
ನಾವೆಲ್ಲ ಬೆಚ್ಚಿ–ಬೆದರಿ
ಆ ತಾಯಿ ಎಲ್ಲಮ್ಮನಿಗೆ ಹೆದರಿ
ಮೌನವಾದಾಗ,
ನಾನು ಇಷ್ಟು ದಿನ ಮುಚ್ಚಿಟ್ಟಿದ್ದೆಲ್ಲಾ
ಎಲ್ಲರ ಮುಂದೆ ಬಿಚ್ಚಿಟ್ಟುಕೊಂಡು
ನಾನಿಂದು ಬರೀ ಬೆತ್ತಲೆ–ಬೆತ್ತಲೆ–ಬೆತ್ತಲೆ

ಶ್ರೀಮತಿ ಎಸ್. ಪಿ. ಪದ್ಮಿನಿ ನಾಗರಾಜು

# ವಿ. ಐ. ಪಿ.

ದೇಶದಲ್ಲಿ ಇತ್ತೀಚೆಗೆ ವಿ. ಐ. ಪಿ. ಗಳಿಗೆ ಭದ್ರತಾ ವ್ಯವಸ್ಥೆಗೆ ವಿಶೇಷ ಮುತುವರ್ಜಿ ವಹಿಸುತ್ತಿರುವುದು ಸಾಮಾನ್ಯ ಸಂಗತಿಯಾಗಿದೆ. ತಮಿಳುನಾಡಿನಲ್ಲಿ ಇದುವರೆಗೂ ವಿಶೇಷ ಭದ್ರತಾ ವ್ಯವಸ್ಥೆಯಲ್ಲಿ ಕಾಪಾಡಿಕೊಂಡು ಬರಲಾಗುತ್ತಿರುವ ಏಕೈಕ ವ್ಯಕ್ತಿಯೆಂದರೆ ಜಯಲಲಿತಾ. ಈ ಸಾಲಿಗೆ ಈ ಜನವರಿ 23 ರಂದು ಹುಟ್ಟಿದ ಹೆಣ್ಣು ಮಗುವೂ ಕೆಲ ದಿನಗಳ ಮಟ್ಟಿಗೆ ಸೇರಿತು.

ಈ ವಿ. ಐ. ಪಿ. ಬೇರೆ ಯಾರೂ ಅಲ್ಲ. ರಾಜೀವ್ ಹತ್ಯೆಯ ಸಂಚಿನಲ್ಲಿ ಪಾಲುಗೊಂಡ ನಳಿನಿಯ ಮಗಳು. ಬಂಧನಕ್ಕೊಳಗಾದಾಗ ನಳಿನಿ ಮೂರು ತಿಂಗಳ ಗರ್ಭಿಣಿ. ಈ ವಿ. ಐ. ಪಿಯ ತಂದೆ, (ತಮಿಳು ಭಯೋತ್ಪಾದಕರ ಹಸ್ತಕ ಮುರುಗನ್) ಸಂಚಿನಲ್ಲಿ ಪಾಲ್ಗೊಂಡ ಅಜ್ಜಿ ಹಾಗೂ ಸೋದರ ಮಾವ ಹೀಗೆ ಎಲ್ಲರೂ ಈಗ ಸರಕಾರಿ ಆತಿಥ್ಯ (ಸೆರೆಮನೆಯಲ್ಲಿ) ಅನುಭವಿಸುತ್ತಿದ್ದಾರೆ.

ಚೆಂಗಲ್ ಪೇಟೆಯ ಮೆಡಿಕಲ್ ಕಾಲೇಜ್ ಹಾಸ್ಪಿಟಲ್‌ನಲ್ಲಿ ಹುಟ್ಟಿದ (ಜನವರಿ 23, 1992) ಈ ವಿ. ಐ. ಪಿ. ಗೆ ಅರಿಶಿನ ಕಾಮಾಲೆ ತಗುಲಿತು. ಚಿಕಿತ್ಸೆಗಾಗಿ ಮಗುವನ್ನು ಮದರಾಸಿನ "ಇನ್‌ಸ್ಟಿಟ್ಯೂಟ್ ಆಫ್ ಚೈಲ್ಡ್ ಹೆಲ್ತ್" (ICH) ನಲ್ಲಿ ಆರೈಕೆಗಾಗಿ ಸೇರಿಸಲಾಯಿತು. ಅಲ್ಲಿ ಏಳನೆ ಅಂತಸ್ತಿನಲ್ಲಿ ಚಿಕಿತ್ಸೆ ಪಡೆದ ಈ ಮಗುವಿಗೆ ಸಶಸ್ತ್ರ ಪಡೆ ಹಗಲಿರುಳು ಕಾವಲು ಕಾಯುತ್ತಿತ್ತು. ಅಲ್ಲಿರುವ ರೋಗಿಗಳನ್ನು ಕಾಣಬರುವ ಅವರ ಬಂಧು ಬಾಂಧವರಿಗೆಲ್ಲ ಪೋಲೀಸ್ ತಪಾಸಣೆ ಅನಿವಾರ್ಯವಾಯಿತು.

ಈ ಕೂಸು ಚೆಂಗಲ್ ಪೇಟೆ ಮೆಡಿಕಲ್ ಕಾಲೇಜ್ ಹಾಸ್ಪಿಟಲ್‌ನಿಂದ ಮದರಾಸಿನ ICH ಗೆ ಬಂದಿದ್ದು ಆಕೆಯ ಅಜ್ಜಿಯ ಕೈವಾಡದಿಂದ. ಈ ಮೊದಲು ನರ್ಸ್ ಆಗಿ ಕೆಲಸಮಾಡುತ್ತಿದ್ದ ಆಕೆಯ ಅಜ್ಜಿ (ಪದ್ಮಾ) ಮಗುವಿಗೆ ಫಿಟ್ಸ್ ಇದೆಯೆಂದು ವೈದ್ಯರಲ್ಲಿ ಹೇಳಿದಳು. ಇದರಿಂದಾಗಿ ಮಗುವನ್ನು ಚಿಕಿತ್ಸೆಗಾಗಿ ಚೆಂಗಲ್ ಪೇಟೆಯಿಂದ ಮದರಾಸಿನ ICH ಗೆ ವರ್ಗಾಯಿಸಲಾಯಿತು. ಅಲ್ಲಿ ಮಗುವನ್ನು ಪರೀಕ್ಷಿಸಿದಾಗ ಫಿಟ್ಸ್ ಇಲ್ಲವೆಂದು ಖಾತ್ರಿಯಾಯಿತಾದರೂ ಅಜ್ಜಿಯ ಕೈ ಚಳಕದಿಂದ ಮೊಮ್ಮಗಳಿಗೆ ಇನ್ನೂ ಒಳ್ಳೆಯ ಶುಶ್ರೂಷೆ ಜೊತೆಗೆ ರಾಜೋಪಚಾರ ಲಭ್ಯವಾಯಿತು.

ನಿಯೋ-ನಟಾಲಜಿಸ್ಟ್ ಹಾಗೂ ಮೂವರು ನರಶಾಸ್ತ್ರ ತಜ್ಞರು ಮಾತ್ರವಲ್ಲದೆ ಇನ್ನೂ ಹಲವಾರು ಸ್ಪೆಷಲಿಸ್ಟರು ಸರದಿಯ ಪ್ರಕಾರ ಮುತುವರ್ಜಿಯಿಂದ ಈ ವಿ. ಐ. ಪಿ. (ಮಗುವಿನ) ಆರೈಕೆ ಮಾಡಿದರು. ಮಗುವಿನ ಕೇಸ್ ಶೀಟ್ ಮೇಲೆ 'VIP' ಎಂದೇ ಹೆಸರಿಸಲಾಗಿತ್ತು.

ಹಲವಾರು ಉಚ್ಚ ಪೋಲೀಸ್ ಅಧಿಕಾರಿಗಳು ಹಾಗೂ ಆರೋಗ್ಯ ಇಲಾಖೆಯ ಅಧಿಕಾರಿಗಳು ಆಗಾಗ ದವಾಖಾನೆಗೆ ಭೇಟಿ ನೀಡಿ ಮಗುವನ್ನು ಕಂಡು, ಅದಕ್ಕೆ ಚಿಕಿತ್ಸೆ ನೀಡುವವರಿಗೆ ತಾಕೀತು ಮಾಡಿ ಹೋಗುತ್ತಿದ್ದರು.

ಸಮವಸ್ತ್ರ ಧರಿಸಿ ಕಾಯುತ್ತಿರುವ ಹಾಗೂ ಮಫ್ತಿಯಲ್ಲಿ ತಿರುಗುವ ಪೋಲೀಸರ ಕಣ್ತಪ್ಪಿಸಿ ಒಂದು ನರಪಿಳ್ಳೆಯೂ ಅತ್ತಿತ್ತ ಸುಳಿಯುವುದು ಸಾಧ್ಯವಿರಲಿಲ್ಲ. ಆ ಒಂಬತ್ತು ಅಂತಸ್ತಿನ ದವಾಖಾನೆಯಲ್ಲಿ ದಾಖಲಾದ ಎಲ್ಲ ರೋಗಿಗಳ ಹಾಗೂ ಅವರನ್ನು ಕಾಣ ಬರುವವರ ವಿಳಾಸಗಳನ್ನು ಪೋಲೀಸರು ಪಡೆದುಕೊಂಡು, ಅವುಗಳ ಸಾಚಾತನವನ್ನು ದೃಢಪಡಿಸಿಕೊಂಡರು.

ಆದರೆ ಇಷ್ಟೆಲ್ಲ ಮುತುವರ್ಜಿ ತೆಗೆದುಕೊಂಡರೂ ತಾಯಿ ಹಾಲಿಗೆ ಹಂಬಲಿಸಿ ಮಗು ಅಳುವುದು ಕರುಳು ಕತ್ತರಿಸುವಂತಹುದಾಗಿತ್ತು. ಈ ಮಗುವಿನೊಂದಿಗೆ ಅದರ ಅಜ್ಜಿಯನ್ನು ಕರೆತಂದ ಅಧಿಕಾರಿಗಳಿಗೆ ತಾಯಿಯನ್ನು ಕರೆತರಬೇಕೆಂದು ಅನಿಸಲಿಲ್ಲವೇಕೊ ?

ಈ ಪ್ರಕರಣದ ಇನ್ನೊಂದು ಮುಖ ಅಷ್ಟೇ ಕುತೂಹಲಕಾರಿಯಾಗಿದೆ. ಈ ಮಗುವಿನ ಕಾರಣದಿಂದಾಗಿ ಈ ದವಾಖಾನೆಗೆ ಅನಿರ್ಬಾಧಿತ ವಿದ್ಯುತ್ ಪೂರೈಸುವಂತೆ ಸ್ವಯಂ ಜಯಲಲಿತಾ ವಿದ್ಯುಚ್ಛಕ್ತಿ ಇಲಾಖೆಯ ಮೇಲೆ ಪ್ರಭಾವ ಬೀರಿದರೆ, ಈ ದವಾಖಾನೆಯ ಸುತ್ತುಮುತ್ತ ಇರುವ ಬೀದಿ ದೀಪಗಳೆಲ್ಲ ಒಂದೂ ತಪ್ಪದೆ ಉರಿಯುವ ವ್ಯವಸ್ಥೆಯಾಯಿತು. ದೀಪ ಇಲ್ಲದ ಕಡೆ ಹೊಸ ದೀಪಗಳನ್ನು ಹಾಕಲಾಯಿತು. ದವಾಖಾನೆಯಲ್ಲಿ ಸ್ವಚ್ಛತೆಗೆ ಆದ್ಯತೆ ಎನ್ನುವುದು ಹೊಸ ವಿಷಯವಲ್ಲ. ಆದರೆ ಈ ದವಾಖಾನೆಯಲ್ಲಿ ಈ "ವಿ. ಐ. ಪಿ" ಯಿಂದಾಗಿ ಅದು ಗರಿಷ್ಠ ಮಟ್ಟಕ್ಕೇರಿತು. ಅಷ್ಟೇ ಏಕೆ ಆ ಪ್ರದೇಶವೇ ಠಾಕು-ಠೀಕಾಗಿ ಹೊಸ ಕಳೆಯಿಂದ ಕಾಣತೊಡಗಿತು. ಆ ದವಾಖಾನೆಯಲ್ಲಿ ಕೆಲಸ ಮಾಡುವ ನಾಲ್ಕನೆಯ ದರ್ಜೆಯ ಕೆಲಸಗಾರರೂ ಕೂಡ ಪೋಲೀಸರ ಉಪಸ್ಥಿತಿಯ ಕಾರಣ ಕುಡಿದು ಕೆಲಸಕ್ಕೆ ಬರುವ ಹವ್ಯಾಸವನ್ನು ತೊರೆದರು. ಜಯಲಲಿತಾ ಅಧಿಕಾರ ಸೂತ್ರ ಹಿಡಿದೊಡನೆ ಅಗ್ಗದ ಮದ್ಯವನ್ನೂ ನಿಷೇಧಿಸಿದರು. (ತುಟ್ಟಿಯ ದರದ ಅಂಗಡಿಗಳು ಈಗ ಹೆಚ್ಚಿವೆ ಅದು ಪ್ರತ್ಯೇಕ ವಿಷಯ) ಈ 'ICH' ಕ್ಷೇತ್ರದಲ್ಲಿ ಮಗುವಿನ ಕಾರಣ ಕೆಲ ದಿನ ಸಂಪೂರ್ಣ ಪಾನ ನಿಷೇಧ ಜಾರಿಯಲ್ಲಿತ್ತು. ●

---

ಬಿರುಕು ಬಿಟ್ಟಿತು ? ನಾನು ಇದ್ದಂತೆಯೇ ಇದ್ದೇನಲ್ಲಾ ! ತೊಡೆಯ ಮೇಲಿನ ಮಗುವನ್ನು ಪ್ರೀತಿಸಿದಷ್ಟೇ ಇಂದೂ ಅವಳನ್ನು ಪ್ರೀತಿಸುತ್ತಿರುವೆನಲ್ಲಾ !

ಇದನ್ನೇ ತಲೆಮಾರು, 'ಜನರೇಷನ್ ಗ್ಯಾಪ್' ಎಂದೆಲ್ಲಾ ಹೇಳುವರೇನೋ. ನನ್ನ ನೋವನ್ನು ಶಾಂತಮ್ಮನ ಬಳಿ ಹೇಳಿದಾಗ ಅವರು ನನ್ನ ತಲೆ ನೇವರಿಸಿ 'ಮಕ್ಕಳು ವಯಸ್ಸಿನೊಂದಿಗೆ ಬದಲಾಗುತ್ತಾರೆ. ನೀನು ತಾಳ್ಮೆಯಿಂದಿರು ಊರ್ಮಿಳಾ. ದುಡುಕಿ ಏನೂ ಹೇಳಬೇಡ' ಎಂದರು.

ಶರತ್‌ನ ಎಂಜಿನಿಯರಿಂಗ್ ಸಹಪಾಠಿ ಸಾರಿಕಾಳ ಮೇಲೆ ಅವನಿಗೆ ವಿಶೇಷ ಒಲವು ಇದೆ ಎಂದು ನನಗೆ ತಿಳಿದಿತ್ತು. ಹುಡುಗಿ ಬಂಗಾಳದವಳಾದರೂ ನೋಡಲು ಮುದ್ದಾಗಿದ್ದಾಳೆ. ಶರತ್‌ನ ಮೆಚ್ಚುಗೆಗೆ ಪಾತ್ರಳಾದವಳು ಎಂದು ಅವಳನ್ನೇ ಸೊಸೆಯನ್ನಾಗಿ ಮಾಡಿಕೊಳ್ಳಲು ಯೋಚಿಸಿದೆ. ಕಳೆದ ವರ್ಷ ತಿಂಗಳ ರಜೆಯಲ್ಲಿ ಶರತ್ ಭೂಪಾಲದಿಂದ ಬಂದೊಡನೆ ನಾನೇ ಹೇಳಿದೆ.

'ಶರತ್ ನಿನಗೂ ಕೆಲಸವಾಗಿ ವರ್ಷವಾಯ್ತಲ್ಲಪ್ಪ. ಇನ್ನೆಷ್ಟು ದಿನ ಹೋಟಲೂಟ ಮಾಡಿ ಆರೋಗ್ಯ ಹಾಳು ಮಾಡಿಕೊಳ್ಳುತ್ತೀ ? ನಿನ್ನ ಗೆಳತಿ ಸಾರಿಕಾಳನ್ನು ಮದುವೆಯಾಗುವ ಆಸೆಯಿದ್ದರೆ, ಅವಳ ತಂದೆ-ತಾಯಿಯರನ್ನು ನೋಡಿ ಮಾತನಾಡೋಣ. ಈ ರಜೆಯಲ್ಲಿ ಮದುವೆ ಮುಗಿಸಿಕೊಂಡೇ ಹೋಗುವೆಯಂತೆ.' ಅವನ ಮನದಲ್ಲಿದ್ದುದನ್ನೇ ನಾನೂ ಹೇಳಿದೆನೆಂದೋ ಏನೋ ಶರತ್ ನಸುನಗುತ್ತಾ ಒಪ್ಪಿಕೊಂಡ. ಒಬ್ಬಳೇ ಮಗಳೆಂದು ಸಾರಿಕಾಳ ಹೆತ್ತವರು ಅವಳಿಗೆ ಅದ್ದೂರಿ ಮದುವೆಯನ್ನೇ ಮಾಡಿಕೊಟ್ಟರು. ಹೆಂಡತಿಯನ್ನು ಕರೆದುಕೊಂಡೇ ಹೊರಟ ಶರತ್.

ಹೊರಡುವಾಗ ಪ್ರೀತಿಯಿಂದ ಹೇಳಿದ್ದ 'ಅಮ್ಮಾ. ನೀನೇನೋ ಹೋಟಲೂಟ ಬೇಡ ಎಂದು ಮದುವೆ ಮಾಡಿದ್ದೀ. ಆದರೆ ಈ ನನ್ನ ಮಹಾರಾಣಿಗೆ ಅಡಿಗೆಯೇ ಬರೋಲ್ಲವಂತೆ. ಜೊತೆಗೆ ಅವಳು ಮಾಡೋ ಮೀನು ಸಾರು ನಾನು ತಿನ್ನಲೇ ? ಹೇಗೂ ಶರಣ್ಯ ಮಣಿಪಾಲದಲ್ಲಿದ್ದಾಳೆ. ಇಲ್ಲಿ ನೀನೊಬ್ಬಳೇ ಇದ್ದು ಏನು ಮಾಡುತ್ತೀ ? ನೀನೂ ಹೆಚ್ಚು ಕಮ್ಮಿ ಇಪ್ಪತ್ತು ವರ್ಷಗಳಿಂದ ದುಡಿದು ಸಾಕಾಗಿದ್ದೀ. ನಿವೃತ್ತಿಗೆ ಬರೆದು ಕೊಟ್ಟು ಅಲ್ಲಿಗೇ ಬಂದು ಬಿಡಮ್ಮಾ. ನಿನ್ನ ಕೈ ಅಡಿಗೆ ತಿನ್ನದೆ ತುಂಬಾ ಬೇಸರವಾಗಿದೆ.'

ನಾನು ನಸುನಗುತ್ತಾ 'ಈಗ ಹೀಗನ್ನುತ್ತೀ. ಆಮೇಲೆ ಸಾರಿಕಾ ಮಾಡೋ ಹಾಗೆ ನಿಂಗೆ ಅಡಿಗೇನೇ ಮಾಡೋಕೆ ಬರ್‍ಲೊಲ್ಲ ಅಮ್ಮ ಅನ್ನುತ್ತೀಯೇನೋ. ಇದೀಗ ಹೊಸದಾಗಿ ಮದುವೆಯಾಗಿದ್ದೀ. ನಾಲ್ಕು ದಿನ ಇಬ್ಬರೇ ಹಾಯಾಗಿರಿ. ಶರಣ್ಯಾಳ ಮೆಡಿಸನ್ ಮುಗಿಯಲಿ. ಅವಳಿಗೊಂದು ಮದುವೆ ಮಾಡಿ, ಆಮೇಲೆ ನಿನ್ನ ಮನೆಗಲ್ಲದೆ ಇನ್ನೆಲ್ಲಿಗೆ ಬರುತ್ತೇನೆ ಹೇಳು ?' ಎಂದಿದ್ದೆ.

ನೆನಪಿನ ಅಂಗಳದಿಂದ ಹೊರಬಂದಾಗ ಹಜಾರದ ಗಡಿಯಾರ ನಾಲ್ಕು ಹೊಡೆದಿತ್ತು. 'ಪೋಸ್ಟ್' ಶಬ್ದ ಕೇಳಿ ಬಾಗಿಲು ತೆರೆದೆ. ಶರತ್-ಸಾರಿಕಾ ವಾರಕ್ಕೊಂದಾದರೂ ತಪ್ಪದೆ ಬರೆಯುವ ಅಭ್ಯಾಸ ಇಟ್ಟುಕೊಂಡಿದ್ದರು. ಅವರದ್ದೇ ಇರಬಹುದೆಂದುಕೊಂಡೆ. ಆದರೆ ವಿಳಾಸದ ಅಕ್ಷರ ಶರಣ್ಯಾಳದಾಗಿತ್ತು. ಪರೀಕ್ಷೆಯ ತರಾತುರಿಯಲ್ಲೂ ನನಗೆ ಕಾಗದ ಬರೆಯಲು ಬಿಡುವು ಸಿಕ್ಕಿತೇ ಎಂದು ಅಚ್ಚರಿಪಡುತ್ತಾ ಪತ್ರ ಬಿಡಿಸಿದೆ.

'ಅಮ್ಮಾ,

ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದ್ದೇನೆ. ಹುಟ್ಟು ಸಾವುಗಳು ನಮ್ಮ ಇಚ್ಛಾನುಸಾರವಲ್ಲ ಎಂದು ನೀನು ಆಗಾಗ ಹೇಳುವುದುಂಟು. ನಿಜ. ಆದರೆ ಬದುಕು ನಮ್ಮ ಕೈಯಲ್ಲೇ ಇದೆ. ಅದನ್ನಾದರೂ ನನ್ನ ಇಚ್ಛೆಗನುಸಾರವಾಗಿ ರೂಪಿಸಿಕೊಳ್ಳಬೇಕೆಂದಿದ್ದೇನೆ.

ನಿನ್ನಿಂದ ಒಂದು ವಿಷಯವನ್ನು ಇಷ್ಟು ದಿನ ಗೋಪ್ಯವಾಗಿಟ್ಟಿದ್ದಕ್ಕೆ ಕ್ಷಮಿಸು. ನಾನು ನಮ್ಮ ಕಾಲೇಜಿನ ಒಬ್ಬ ಅಮೆರಿಕನ್ ಅಧ್ಯಾಪಕರನ್ನು ಪ್ರೀತಿಸಿದ್ದೇನೆ. ಅವರ ಪ್ರೀತಿಯಲ್ಲಿ ನನ್ನ ಬದುಕಿಗೊಂದು ಅರ್ಥ ಕಂಡುಕೊಂಡಿದ್ದೇನೆ. ಅವರು

ತಮ್ಮ ಕೆಲಸದ ಕಾಂಟ್ರಾಕ್ಟ್ ಮುಗಿಸಿ. ನ್ಯೂಯಾರ್ಕ್‌ಗೆ ಹಿಂತಿರುಗಲಿದ್ದಾರೆ. ಆದ ಕಾರಣ ನಾವಿಬ್ಬರೂ ಈ ಭಾನುವಾರ ಮಿಲ್‌ಗ್ರೀವ್ಸ್ ಚರ್ಚ್‌ನಲ್ಲಿ ಮದುವೆಯಾದೆವು. ನಾನೂ ಅವರೊಂದಿಗೆ ವಾರಾಂತ್ಯದಲ್ಲಿ ನ್ಯೂಯಾರ್ಕ್‌ಗೆ ಹೊರಟಿದ್ದೇನೆ.

ಹೊರಡುವ ಮುನ್ನ ನಿನ್ನನ್ನು ಭೇಟಿಸಬೇಕೆಂಬುದು ನನ್ನ ಪತಿ ವಿಲಿಯಂಸ್ ಅವರ ಇಚ್ಛೆ. ನಿನ್ನ ಒಪ್ಪಿಗೆಯಿಲ್ಲದೆ ಮದುವೆಯಾದೆನೆಂದು ಬೇಸರವಿಲ್ಲ ತಾನೆ? ಶರತ್‌ಗೆ ವಿಷಯ ತಿಳಿಸಿದ್ದೇನೆ. ಮುಂಬಯಿಯ ವಿಮಾನ ನಿಲ್ದಾಣದಲ್ಲಿ ಕಾಣುವೆ ಎಂದು ಬರೆದಿದ್ದಾನೆ. ಈ ವಾರದ ಕಡೆಯಲ್ಲಿ ನಾನು-ವಿಲಿಯಂಸ್ ಅಲ್ಲಿಗೆ ಬರುತ್ತಿದ್ದೇವೆ. ದಿನಕರ್ ಅಂಕಲ್‌ಗೂ ವಿಷಯ ತಿಳಿಸು.

ಶರಣ್ಯಾ.

ಪತ್ರ ಓದುತ್ತಾ ಕುರ್ಚಿಯಲ್ಲಿ ಕುಸಿದೆ. ಇದು ಶರಣ್ಯಾಳನ್ನು ಅತಿ ಮುದ್ದಿನಿಂದ ಬೆಳೆಸಿದ್ದರ ಫಲವೇ? ಅವಳು ತಂದೆಯ ಪ್ರೀತಿಯಿಂದ ವಂಚಿತಳಾದದ್ದಕ್ಕೆ ನನಗೀ ಶಿಕ್ಷೆಯೇ? ನಾನು ಅವಳನ್ನು ಬೆಳೆಸುವುದರಲ್ಲಿ ಎಲ್ಲಿ ಎಡವಿದೆ? ಅವಳ ಬದುಕೇ ನನ್ನ ಬದುಕು ಎಂದು ಭಾವಿಸಿದ ನನ್ನನ್ನು ಅವಳು ಇಷ್ಟೊಂದು ಅಲಕ್ಷಿಸಲು ಕಾರಣ? ನನ್ನನ್ನು ಅಷ್ಟೊಂದು ಪ್ರೀತಿಸುತ್ತಿದ್ದ ಶರಣ್ಯಾ, ವಿಲಿಯಂಸ್‌ನನ್ನು ಕಂಡೊಡನೆ ಇಷ್ಟೊಂದು ಬದಲಾದಳೇಕೆ? 'ಅವನ ಪ್ರೀತಿಯಲ್ಲಿ ನನ್ನ ಬದುಕಿಗೊಂದು ಅರ್ಥ ಹುಡುಕಿಕೊಂಡೆ' ಎಂದು ಬರಿದಿದ್ದಾಳಲ್ಲಾ. ಅಂದರೆ ನಾನು-ಶರತ್ ಅವಳಿಗೆ ತೋರಿದ ಪ್ರೀತಿಯಲ್ಲಿ ಅರ್ಥವೇ ಇರಲಿಲ್ಲವೇ? ಅದಕ್ಕೆ ಬೆಲೆಯೇ ಇಲ್ಲವೇ? ಯಾವುದನ್ನು ನನ್ನ ಜೀವನದ ಅರ್ಥ ಎಂದು ಕೊಂಡಿದ್ದೇನೋ ಅದು ಅಲ್ಲ ಎನಿಸಿದಾಗ, ಮಾನಸಿಕವಾಗಿ ಕುಸಿದೆ. ಬದುಕನ್ನು ಅರ್ಥೈಸುವುದರಲ್ಲಿ ನಾನು ಸಂಪೂರ್ಣವಾಗಿ ಸೋತೆ.

## ದಿನಕರ:

ಸಂಜೆ ಆಫೀಸಿನಿಂದ ಮನೆಗೆ ಬಂದಾಗ ಅಭ್ಯಾಸ ಬಲದಿಂದ ಕಣ್ಣು ಮಾಧವನ ಮನೆಯ ಕಡೆ ಹರಿಯಿತು. ನಾಲ್ಕು ತಿಂಗಳಿಂದ ಬೀಗ ಮುದ್ರಿತವಾಗಿದ್ದ ಮನೆಯ ಹೆಬ್ಬಾಗಿಲು ಇಂದು ತೆರೆದದ್ದು ಕಂಡು ಅಚ್ಚರಿಯಾಯ್ತು. ಅಮ್ಮನೇನಾದರೂ ಕಸ ಹೊಡೆಯಲು ತೆರೆದಿರುವಳೋ ಎಂದು ಅನುಮಾನಿಸುತ್ತಾ, ನನ್ನ ಮನೆಗೂ ಹೋಗದೆ, ಅಲ್ಲಿಗೇ ಹೆಜ್ಜೆ ಹಾಕಿದೆ. ಹಜಾರದ ಮೂಲೆಯಲ್ಲಿ ಊರ್ಮಿಳಾ ಮಂಡಿಯ ಮೇಲೆ ಮುಖವಿಟ್ಟು ಕುಳಿತಿದ್ದಳು. ಹೆಜ್ಜೆಯ ಸದ್ದು ಕೇಳಿ ಅವಳು ಬೆಚ್ಚಿ ತಲೆಯೆತ್ತಿದಳು.

ಈಗ ಬೆಚ್ಚುವ ಸರದಿ ನನ್ನದಾಯ್ತು. ಊರ್ಮಿಳಾಳ ಕಣ್ಣುಗಳು ಕೆಂಡದುಂಡೆಗಳಾಗಿದ್ದವು. ಮಾಧವನ ಮರಣಾನಂತರ ಕೂಡ ಊರ್ಮಿಳಾ ಇಷ್ಟೊಂದು ಅತ್ತದ್ದನ್ನು ನಾನು ಕಂಡಿರಲಿಲ್ಲ. ಯಾರಿಗೇನಾಯಿತು? ಅವಳ ಬಳಿ ಹೋಗಿ, ನೆಲದ ಮೇಲೆ ಕುಳಿತು ಆತಂಕದಿಂದ ಕೇಳಿದೆ. 'ಏನಾಯ್ತಮ್ಮ ಊರ್ಮಿಳಾ? ಸೊಸೆ ಬಸುರೀಂತ ಸಂಭ್ರಮ ಪಟ್ಟುಕೊಂಡು ಭೂಪಾಲಕ್ಕೆ ಹೋದೆಯಲ್ಲಾ! ಇನ್ನೂ ನಾಲ್ಕು ತಿಂಗಳಾಗಿಲ್ಲ. ಅಷ್ಟರಲ್ಲೇ ತಿರುಗಿ ಬಂದುಬಿಟ್ಟೆ? ಎಲ್ಲಾ ಕ್ಷೇಮ ತಾನೆ?

ಗಾಳಿ ತುಂಬಿದ ಬೆಲೂನಿಗೆ ಸೂಜಿ ಚುಚ್ಚಿದಂತಾಯ್ತು ಊರ್ಮಿಳಾಳಿಗೆ. ಮತ್ತೆ ಬಿಕ್ಕ ತೊಡಗಿದಳು. ಊರ್ಮಿಳಾ 'ದಿನಕರ್. ನಾನು ಪಾಪಿ. ಸುಖಪಡುವುದು ನನ್ನ ಹಣೆಯಲ್ಲಿ ಬರೆದಿಲ್ಲ. ಶರಣ್ಯಾ ಅಮೆರಿಕೆಗೆ ಹಾರುವಾಗ ಒಮ್ಮೆಯಾದರೂ—ಅಮ್ಮಾ. ನಿನ್ನನ್ನೂ ಅಲ್ಲಿಗೇ ಕರೆಸಿಕೊಳ್ಳುತ್ತೇನೆ. ಬಂದುಬಿಡು-ಎನ್ನಲಿಲ್ಲ. ಮಗ ಪ್ರೀತಿಯಿಂದ ಕರೆದಾಗ ಇರುವ ಒಂದು ಸಂಬಂಧದ ಎಳೆಯೂ ಕಡಿದು ಹೋಗಬಹುದು ಎಂದು ಹೆದರಿ ಆರು ತಿಂಗಳ ರಜೆ ಬರೆದುಕೊಟ್ಟು ಭೂಪಾಲಕ್ಕೆ ಹೋದದ್ದು ನಿಮಗೇ ಗೊತ್ತು. ಹೋದ ಹೊಸತರಲ್ಲಿ ಎಲ್ಲಾ ಚೆನ್ನಾಗಿಯೇ ಇತ್ತು ದಿನಕರ. ನಾನು ಕೂಡ ಸೊಸೆ ಗರ್ಭಿಣಿ-ಆಯಾಸವಾಗದಿರಲಿ ಎಂದು ಉದ್ದೇಶಿಸಿ, ನಾನೇ ಅಡಿಗೆ ಕೆಲಸ ಮಾಡಿಕೊಂಡೆ. ಅವಳು ಬೇಗನೆದ್ದರೆ 'ಈ ಚಳಿಯಲ್ಲಿ ಬೇಗನೆ ಯಾಕೆ ಎದ್ದೆ?' ಎಂದು ಬೆಡ್‌ಕಾಫಿ ಕೊಟ್ಟು ಉಪಚರಿಸಿದೆ. ನನ್ನ ಕೈ ಊಟದ ರುಚಿಗೆ ಶರತ್ ಕೂಡ ಹೊಗಳುತ್ತಾ ಎರಡು ತುತ್ತು ಹೆಚ್ಚೇ ತಿನ್ನುತ್ತಿದ್ದ.

ಆದರೆ ದಿನ ಕಳೆದಂತೆ ಸಾರಿಕಾ ಬದಲಾದಳು. ನಾನೇ ಎಲ್ಲಾ ಕೆಲಸ ಮಾಡುತ್ತಿದ್ದುದರಿಂದ, ಕೆಲಸದವಳನ್ನು ನಿಲ್ಲಿಸಿಬಿಟ್ಟಳು. ಕೆಲವೊಮ್ಮೆ ಮಲಗುವ ಕೋಣೆಯಲ್ಲಿ ಶರತ್‌ನೊಂದಿಗೆ 'ನಿಮ್ಮಮ್ಮ ಏನು ಇಲ್ಲೇ ಠಿಕಾಣಿ ಹೂಡಲು ಬಂದಿರೋ ಹಾಗೆ ಕಾಣುತ್ತೆ. ಇನ್ನೇನು ಮಗಳೂ ಕೈಕೊಟ್ಟು ಹೋದಳು. ಇನ್ನು ನಾವೇ ತಾನೇ ಗತಿ! ನೀವು ಬೇರೆ ಅವರ ಅಡಿಗೆ ಹೊಗಳಿ ಅಟ್ಟಕ್ಕೇರಿಸುತ್ತೀರಿ.' ಎನ್ನುತ್ತಿದ್ದುದು ನನ್ನ ಕಿವಿಗೂ ಬೀಳುತ್ತಿತ್ತು. ಅಷ್ಟು ಪ್ರೀತಿಸುತ್ತಿದ್ದ ಶರತ್ ಕೂಡ ನನ್ನ ಪರವಾಗಿ ಎರಡು ಮಾತು ಆಡದೇ ಹೋದದ್ದು ನನಗೆ ನೋವುಂಟು ಮಾಡಿತ್ತು. 'ಮುತ್ತು ಕೊಟ್ಟವಳು ಬಂದಾಗ, ತುತ್ತುಕೊಟ್ಟವಳನ್ನು ಮರೆಯುವುದು ಸಹಜ' ಎಂದು ಎಲ್ಲವನ್ನೂ ನುಂಗಿದೆ, ದಿನಕರ್' ಊರ್ಮಿಳಾ ಮಾತು ನಿಲ್ಲಿಸಿ ಮತ್ತೆ ಕಣ್ಣೊರೆಸಿಕೊಂಡಳು.

ನಾನು 'ಮುಂದೇನಾಯ್ತು, ಹೇಳು' ಎಂದೆ.

'ಮೊನ್ನೆಯ ದಿನ ಅವಳ ಹುಟ್ಟಿದ ಹಬ್ಬಕ್ಕೊಂದು ಎರಡು ಸಿಹಿ, ಎರಡು ಖಾರ ನಾನೇ ಮಾಡಿದ್ದೆ. ಸಾರಿಕಾ ಅವಳ ಗೆಳತಿಯರನ್ನೆಲ್ಲಾ ಕರೆದಿದ್ದಳು. ಶರತ್ ಇನ್ನೂ ಆಫೀಸಿನಿಂದ ಬಂದಿರಲಿಲ್ಲ. ಬಂದವರೆಲ್ಲಾ ನನ್ನ ತಿನಿಸುಗಳನ್ನು ಹೊಗಳುತ್ತಾ ತಿನ್ನುವಾಗ ನಾನು ಕಾಫಿ ಲೋಟಗಳನ್ನು ಇಟ್ಟುಬಂದೆ. ನನ್ನ ಹಿಂದೆಯೇ ಸೊಸೆ ಹಿಂದಿಯಲ್ಲಿ ಆಡಿದ ಮಾತು ಕಿವಿಗಪ್ಪಳಿಸಿತು. 'ನಮ್ಮವರು ತಮ್ಮ ಹಳ್ಳಿಯಿಂದ. ಅಡಿಗೆಯ ಕೆಲಸಕ್ಕೆಂದು ಈಕೆಯನ್ನು ಕರೆತಂದಿದ್ದಾರೆ. ಚೆನ್ನಾಗಿ ಮಾಡ್ತಾರಲ್ವಾ?' ಪ್ರಾಯಶಃ ನನಗೆ ಹಿಂದಿ ತಿಳಿಯದೆಂದು ಸಾರಿಕಾ ಭಾವಿಸಿರಬೇಕು. 'ಅತ್ತೆ' ಎಂದು ಪರಿಚಯಿಸದಿದ್ದರೆ ಬೇಡ. 'ಅಡಿಗೆಯವಳು ಎನ್ನದಿದ್ದರಾಗುತ್ತಿತ್ತಲ್ಲ ದಿನಕರ್. ಇದನ್ನೆಲ್ಲಾ ಶರತ್‌ಗೆ ಹೇಳಿ ಅವನ ಮನಸ್ಸು ಕಹಿಮಾಡಲು ಮನಸ್ಸಾಗಲಿಲ್ಲ. ಇನ್ನಷ್ಟು ದಿನ ಅಲ್ಲಿದ್ದು ಮೊಮ್ಮಗುವನ್ನು ನೋಡಿ ಬರಬೇಕೆಂಬ ಆಸೆಯಿತ್ತು. ಆದರೆ ಇಂದು 'ಅಡಿಗೆಯವಳು' ಎನ್ನಿಸಿಕೊಂಡವಳು. ನಾಳೆ 'ಆಯಾ' ಆದೇನು ಎಂದು ಹೆದರಿ, ರಜೆ ಮುಗಿಯಿತೆಂದು ಸುಳ್ಳು ಹೇಳಿ ಬಂದುಬಿಟ್ಟೆ. ಮಾಧವನ ಜೊತೆ ನಾನೂ ಸತ್ತೇ ಹೋಗಿದ್ದರೆ ಚೆನ್ನಾಗಿತ್ತಲ್ಲವೇ ದಿನಕರ್? ಯಾರಿಗಾಗಿ ನಾನು ಇರಬೇಕು? ಬದುಕುವ ಆಸೆಯೂ ಇಲ್ಲದೆ, ಸಾಯುವ ಧೈರ್ಯವೂ ಇಲ್ಲದೆ ಇದ್ದೇನೆ ಈಗ. ಇಂತಹ ಬದುಕಿಗೆ ಅರ್ಥವಾದರೂ ಏನಿದೆ?'

ಇದುವರೆವಿಗೂ ತನ್ನ ಅಂತರಾಳದ ವೇದನೆಯನ್ನೆಲ್ಲಾ ಅನುಕ್ತಿಯ ಗರ್ಭದಲ್ಲೇ ಅಡಗಿಸಿಕೊಂಡ ಊರ್ಮಿಳಾ, ಇಂದು ಒಮ್ಮೆಲೇ ತನ್ನ ಅಳಲನ್ನೆಲ್ಲಾ ನನ್ನೆದುರು ತೋಡಿಕೊಂಡಾಗ ನಾನು ಅಧೀರನಾದೆ. ಅವಳೆದೆಯ ರೋದನ ನನ್ನೆದೆ ಕಲಕಿತು. ಆದರೂ ಸಮಾಧಾನವಾಗಲೆಂದು 'ಊರ್ಮಿಳಾ? ಹಾಗೇಕೆನ್ನುವೆ? ನೀನು ಈ ಭುವಿಗೆ ಬರುವಾಗ ಮಾಧವನ ಜೊತೆಗಾಗಲಿ,



"ಹಬ್ಬಕ್ಕೆ ನೀವು ಹೊಸ ಬಟ್ಟೆ ತರೋ ವಿಷಯ ಅವರಿಗೆ ತಿಳಿಸಿದ್ದೆ ಮಮ್ಮಿ. ಅದಕ್ಕೇ ಅವರು ಹಾಗೇ ಹೊರಟು ಬಂದಿದ್ದಾರೆ".

ನನ್ನ ನೇ ವಯಸ್ಸಿನಲ್ಲಿ...

# ಕಾವ್ಯರಚನೆಗೆ ನಾಂದಿ ಹಾಡಿದ ವರುಷ

ಹದಿ ಹರೆಯದ ಕನಸಿನ ದಿನಗಳಲ್ಲಿ ನೂರಾರು ಕಾಮನ ಬಿಲ್ಲುಗಳ ಪಲ್ಲವಿಸುತ್ತವೆ. ನಾನೂ ನನ್ನ ಹದಿನಾರನೆಯ ವಯಸ್ಸಿನಲ್ಲಿ ಇಂತಹ ಸುಖ ಸಾಮ್ರಾಜ್ಯದಲ್ಲಿ ವಿಹರಿಸುತ್ತಿದ್ದೆ. ಸಪ್ತಸಾಗರಗಳೂ ಉಕ್ಕಿ ಹರಿದಂತಹ ದಿವ್ಯಾನುಭವದ ಚೇತನ ಹೃದಯದಲ್ಲಿ ಸದಾ ಮಿಡಿಯುತ್ತಿತ್ತು. ಮನೋಸಮುದ್ರದಲ್ಲಿ ಘೋರ್ಗರೆದು ಚಿಮ್ಮುವ ಅಲೆಗಳ ಮಹಾಪೂರ, ಹೃದಯ ವೀಣೆಯ ನವಿರಾದ ತಂತಿಗಳನ್ನು ಮೀಟಿ ನಾದ ತರಂಗಗಳನ್ನು ಹೊರಡಿಸುವ ವಿನೂತನ ಭಾವಗಳು. ತಿಳಿಯಾದ, ಗಹನವಾದ, ನವನವೀನ ವಿಚಾರಲಹರಿಗಳು, ಚಿಂತನೆಯ ಕಲಕಲ ನಿನಾದ ಮನಸ್ಸು ಹೃದಯಗಳನ್ನಾವರಿಸಿದ್ದರೂ ನಾನು ಏನನ್ನೂ ಕೃತಿಗಿಳಿಸುವ ಪ್ರಯತ್ನ ಮಾಡಲಿಲ್ಲ. ಬರವಣಿಗೆಗೆ ಕಾಲವೇ ಕೂಡಿ ಬರಲಿಲ್ಲವೋ ಅಥವಾ ನಾನೇ ಗಟ್ಟಿ ಮನಸ್ಸು ಮಾಡಲಿಲ್ಲವೋ. ಅಂತೂ ನನ್ನ ಹದಿನಾರನೆಯ ವಯಸ್ಸಿನಲ್ಲಿ ಹಾಸ್ಯಕ್ಕಾಗಿ ಒಂದೇ ಒಂದು ಕವನವನ್ನು ರಚಿಸಿದೆನೇ ವಿನಃ ಆ ದಿಶೆಯಲ್ಲಿ ಮತ್ತೆ ಮುಂದುವರಿಯಲಿಲ್ಲ. ಬೇರಾವುದೇ ರೀತಿಯ ಬರವಣಿಗೆ ಅಥವಾ ಸಾಹಿತ್ಯ ರಚನೆಯಲ್ಲೂ ತೊಡಗಲಿಲ್ಲ.

ನಮ್ಮ ಮನೆಯಲ್ಲಿ ಎಲ್ಲರಿಗೂ ಅತಿಯಾದ ಪುಸ್ತಕ ಪ್ರೇಮ. ಹಾಗಾಗಿ ನನಗೆ ಬಾಲ್ಯದಿಂದಲೂ. ಉತ್ತಮ ಸಾಹಿತ್ಯ, ಕಥೆ, ಕವನಗಳ ಮೇಲೆ ವಿಶೇಷ ಒಲವು. ಪ್ರಾಸಬದ್ಧವಾಗಿ ಮಾತನಾಡುವ ಹವ್ಯಾಸ. ಮನ ಸೆಳೆಯುವ ನಿರೂಪಣೆಗಳು, ಮೋಡಿ ಮಾಡುವ ಪದಗುಚ್ಛಗಳ ರಂಗುರಂಗಿನ ಪ್ರಪಂಚ ಯಾವಾಗಲೂ ನನ್ನನ್ನು ಸಮ್ಮೋಹಿನಿಯಂತೆ ಮರುಳುಗೊಳಿಸುತ್ತಿದ್ದಿತು. ಆ ಸುಂದರ ವಿಶ್ವದಲ್ಲಿ ನನ್ನನ್ನು ನಾನು ಮರೆಯುತ್ತಿದ್ದೆ.



ಪುಸ್ತಕ ಯಾವಾಗಲೂ ನನ್ನ ಸಂಗಾತಿ ಹಾಗೂ ಜೀವನದ ಒಂದು ಅವಿಭಾಜ್ಯ ಅಂಗವಾಗಿದ್ದಿತು. ಓದಲು ಕುಳಿತರೆ ಊಟ, ತಿಂಡಿ, ಹೊತ್ತು, ಗೊತ್ತುಗಳ ಪರಿವೆಯೂ ಇರುತ್ತಿರಲಿಲ್ಲ.

ಅನೇಕ ವರ್ಷಗಳು ಕಳೆದ ನಂತರ ನನ್ನ ಇಪ್ಪತ್ತೆರಡನೆಯ ವಯಸ್ಸಿನಲ್ಲಿ ಒಂದೇ ಸಮನಾಗಿ ಹಲವಾರು ಕವನಗಳನ್ನು ರಚಿಸಿದೆ. ಆಗೊಮ್ಮೆ, ಈಗೊಮ್ಮೆ ಯಾವುದಾದರೂ ಲೇಖನವನ್ನು ಬರೆಯುತ್ತಿದ್ದೆ. ಅಲ್ಲಿಂದಾಚೆ ಮತ್ತೆ ನನ್ನ ಬರವಣಿಗೆ ಸ್ಥಗಿತಗೊಂಡಿತು. ಆ ನಂತರ ಮತ್ತೆ ನನ್ನ ಮೂವತ್ತೆರಡನೆಯ ವಯಸ್ಸಿನಲ್ಲಿ ಮತ್ತೆ ಕವನಗಳನ್ನು ಬರೆಯುವ ಹವ್ಯಾಸ ಸ್ವಲ್ಪಮಟ್ಟಿಗೆ ಮುಂದುವರೆದು ನಿಂತಿತು.

### ವಿಶೇಷ ಸೂಚನೆ

"ನನ್ನ 16 ನೇ ವಯಸ್ಸಿನಲ್ಲಿ" ಶೀರ್ಷಿಕೆಗಾಗಿ ಲೇಖನಗಳನ್ನು ಆಹ್ವಾನಿಸುವುದನ್ನು ನಿಲ್ಲಿಸಲಾಗಿದೆ. ಈಗ ಪ್ರಕಟವಾಗುತ್ತಿರುವ ಆ ಶೀರ್ಷಿಕೆಯ ಲೇಖನಗಳು ಈ ಮೊದಲು ಆಯ್ಕೆಯಾಗಿದ್ದು ಇನ್ನು ಮುಂದೆ ಈ ಶೀರ್ಷಿಕೆಯಲ್ಲಿ ಬರುವ ಲೇಖನಗಳನ್ನು ಪರಿಶೀಲಿಸಲಾಗುವುದಿಲ್ಲವೆಂದು ತಿಳಿಸಬಯಸುತ್ತೇವೆ.

ನನ್ನ ಮೂವತ್ತೊಂಬತ್ತನೆಯ ವರುಷವಾದ 1991 ರಲ್ಲಿ ನವ ವರುಷದ ಉಗಮದಿಂದ ಪ್ರಾರಂಭವಾದ ಕವನ ರಚನೆ ಮೊದಲಿಗಿಂತಲೂ ಹೆಚ್ಚಿನ ಸ್ಫೂರ್ತಿ ಹಾಗೂ ಸಂಖ್ಯಾಬಲದಿಂದ ಮುಂದುವರಿಯುತ್ತಿದೆ. ಇದುವರೆಗೆ ಎಂಭತ್ತರ ಹತ್ತಿರದವರೆಗೂ ಕವನಗಳನ್ನು ರಚಿಸಿದ್ದರೂ ಪ್ರಕಟಣೆಗೆ ಕಳುಹಿಸುವಲ್ಲಿ ನಾನು ಯಾವಾಗಲೂ ಹಿಂದು. ಎಂದಾದರೊಂದು ಬಾರಿ ಮನಸ್ಸು ಮಾಡಿ ಕಳುಹಿಸಿದಾಗ ಯಾವ ಕಾರಣದಿಂದಲೋ ಅದು ಪ್ರಕಟವಾಗುತ್ತಿಲ್ಲ. ಸರಿಯಾದ ಪ್ರೋತ್ಸಾಹವಿಲ್ಲದೆ ನನ್ನ ರಚನೆಯ ಕಲೆ ಕಮರಿ ಹೋಗುತ್ತಿದೆಯೇನೋ ಎಂಬ ಅನಿಸಿಕೆ ನನ್ನನ್ನು ಹೆಚ್ಚು ಹೆಚ್ಚು ರಸಾತಳಕ್ಕಿಳಿಸುತ್ತಿದೆ.

ಅಂತೂ ಈ ವರ್ಷ ಗಟ್ಟಿ ಮನಸ್ಸಿನಿಂದ ಬರೆದುದನ್ನು ಆಗಾಗ ವಿವಿಧ ಮಾಸ ಪತ್ರಿಕೆಗಳಿಗೆ ಕಳುಹಿಸುತ್ತಿದ್ದೇನೆ. ನನ್ನ ರಚನೆಯನ್ನು ಪತ್ರಿಕೆಯವರು ಪ್ರಕಟಿಸಲಿ, ಬಿಡಲಿ. ಅದರಿಂದ ನನಗಾದರೂ ಸ್ವಲ್ಪ ಸಂತೃಪ್ತಿ ಸಿಗುತ್ತಿದೆ ಎನ್ನುವುದೇ ಸಮಾಧಾನ. ಇಂದಲ್ಲ ನಾಳೆ, ಎಂದಾದರೊಂದು ದಿನ ನನ್ನ ಪ್ರಯತ್ನಕ್ಕೆ ತಕ್ಕ ಪ್ರತಿಫಲ ಸಿಗುವುದೆಂಬ ಭರವಸೆಯಿಂದ ಕಗ್ಗತ್ತಲ ಹಾದಿಯಲ್ಲೂ ಒಂದು ಬೆಳಕಿನ ಕಿರಣದೊಂದಿಗೆ ಮುಂಬರಿಯುತ್ತಿದ್ದೇನೆ. ಸದ್ಯದ ಪರಿಸ್ಥಿತಿಯಲ್ಲಿ ನನಗೆ ಬರೆಯಲು ಸಾಕಷ್ಟು ಸಮಯದ ಅವಕಾಶವಿಲ್ಲ, ಅನುಕೂಲ ವಾತಾವರಣ, ಪ್ರೋತ್ಸಾಹಗಳೂ ಅಷ್ಟಾಗಿ ಇಲ್ಲ. ಆದರೂ ಜೀವನದಲ್ಲಿ ಏನನ್ನಾದರೂ ಸಾಧಿಸಲೇಬೇಕೆಂಬುದು ನನ್ನ ಹೆಬ್ಬಯಕೆ. ಹೀಗಾಗಿ ಎಲ್ಲಾ ಎಡರು, ತೊಡರುಗಳೊಡನೆ ಸೆಣಸಿಕೊಂಡೇ ಹಾದಿಯನ್ನು ಸವೆಸುತ್ತಿದ್ದೇನೆ. ಆ ದಯಾಮಯನಾದ ಭಗವಂತನು ನನ್ನ ಆಸೆ, ಆಕಾಂಕ್ಷೆಗಳನ್ನು ಈಡೇರಿಸುವನೆಂದು ನಂಬಿದ್ದೇನೆ.

ಹೀಗೆ ನನ್ನ ಹದಿನಾರನೆಯ ವಯಸ್ಸು ಕವನ ರಚನೆಗೆ ನಾಂದಿ ಹಾಡಿ ಒಂದು ಬುನಾದಿಯನ್ನು ಹಾಕಿಕೊಟ್ಟಿದೆ. ಈ ತಳಪಾಯ ಭದ್ರವಾಗಿ ಕಾವ್ಯ, ಕವನ, ಸಾಹಿತ್ಯಗಳ ರಚನೆಗೆ ಸ್ಫೂರ್ತಿ ಸಂಜೀವಿನಿಯಾಗಲೆಂದು ಆಶಿಸುವೆ. ನನ್ನ ಸುತ್ತಮುತ್ತಲಿನ ವಾತಾವರಣ, ಪರಿಸರಗಳು ಈ ನನ್ನ ಹಂಬಲಿಕೆಗೆ ನೀರೆರೆದು ಪೋಷಿಸಲಿ, ಬಾಳು ಭವ್ಯತೆಗೊಳಿಸಲೆಂದು ಆಶಾವಾದಿಯಾಗಿ ಮುನ್ನಡೆಯುತ್ತಲಿರುವೆ.

—ಕೆ. ಎಸ್. ಶಾಹಿದ, ಬೆಂಗಳೂರು

---

ಶರತ್–ಶರಣ್ಯಾಳ ಜೊತೆಗಾಗಲಿ ಬಂದೆಯಾ? ನಿನ್ನ ಬಾಳ್ದಾರಿಯಲ್ಲಿ ಇವರೆಲ್ಲಾ ಸಹಪಥಿಕರು ಅಷ್ಟೆ. ಕಡೆತನಕ ನಡೆದು ನಿನ್ನ ಗುರಿ ಮುಟ್ಟಬೇಕಾದವಳು ನೀನೊಬ್ಬಳೇ. ರಾಮಾಯಣದ ಊರ್ಮಿಳೆ ಹದಿನಾಲ್ಕು ವರ್ಷ ತಪಸ್ವಿನಿಯಾಗಿದ್ದಳು. ನೀನಾದರೋ ಇಪ್ಪತ್ಮೂರು ವರ್ಷಗಳೇ ಯೋಗಿನಿಯಾಗಿ ಬದುಕಿದ್ದೀ. ತಾಳ್ಮೆ ವಹಿಸಿದ್ದೀ. ಈಗೇಕೆ ಹೀಗೆ ಊರ್ಮಿಳಾ?' ಎಂದೆ.

'ನೀವೆನ್ನುವುದು ಸರಿ. ಆದರೆ ನಾನು ಸ್ವಾರ್ಥಿಯಾಗದೆ ಇದ್ದದ್ದಕ್ಕೆ ದೈಹಿಕ ಸುಖವನ್ನೆಲ್ಲಾ ತ್ಯಾಗ ಮಾಡಿದ್ದಕ್ಕೆ ನನಗೇನು ಲಭಿಸಿತು?'

'ಅಖಂಡ ಜೀವನಾನುಭವ ದೊರೆತಿದೆಯಲ್ಲಾ ಊರ್ಮಿಳಾ? ಬಾಳ್ಗಡಲನ್ನು ಮಥಿಸಿದಾಗ ದೊರೆವ ಅಮೂಲ್ಯ ರತ್ನ ಅದು. ಅದರ ಉಪಯೋಗ ಪಡೆದುಕೊಳ್ಳುವುದೇ ಜಾಣತನ' ಸಂತೈಸಿದೆ.

ಒಮ್ಮೆಲೇ ಊರ್ಮಿಳಾಳ ಮುಖಭಾವ ಬದಲಾಯಿತು. ಅವಳಲ್ಲದೇನೋ ಚೈತನ್ಯ ತುಂಬಿಕೊಂಡಿತು. ಅವಳು ನನ್ನೆಡೆಗೆ ಅರ್ಥಪೂರ್ಣವಾಗಿ ನೋಡಿ 'ದಿನಕರ್. ನೀವು ಸಕಾಲದಲ್ಲಿ ನನ್ನ ಕಣ್ಣು ತೆರೆಯಿಸಿದಿರಿ. ಆಗ ನೀವಾಗಿ ಬೇಡಿದಾಗ 'ಇಲ್ಲ' ಎಂದಿದ್ದೆ. ಆಗ ನನ್ನ ಜೀವನದ ಅರ್ಥ-ಆಸೆ ಬೇರೆಯೇ ಇತ್ತು. ಆದರದೀಗ ಬದಲಾಗಿದೆ. ಈಗ ನಾನು ನನಗಾಗಿ ಒಂದು ಹೊಸ ಬದುಕನ್ನು ಬೇಡುತ್ತಿದ್ದೇನೆ. ಹೊಸ ಅರ್ಥ ಹುಡುಕುತ್ತಿದ್ದೇನೆ. ಪ್ರೀತಿ-ವಿಶ್ವಾಸಗಳಿಲ್ಲದ ಈ ಯಾಂತ್ರಿಕ ಅರ್ಥಹೀನ ಬದುಕಿಗೆ, ನಿಮ್ಮ ಒಲವಿನ ಬೆಳಕು ಚೆಲ್ಲಿ ಬೆಳಗುವಿರಾ ದಿನಕರ್?' ಅನಿರೀಕ್ಷಿತವಾಗಿ ನನ್ನ ಭುಜಕ್ಕೊರಗಿದ ದೀರ್ಘ ವಿರಹಿಣಿಯನ್ನು ನನ್ನ ಬಾಹುಗಳಿಂದ ಬಳಸಿ ಎದೆಗವುಚಿಕೊಂಡೆ. ಅವಳ ವೇದನೆಗೆ ನಾನೂ ಸ್ಪಂದಿಸಿದೆ. ಅವಳ ತಲೆಗೂದಲಲ್ಲಿ ಬೆರಳಾಡಿಸಿ, ಅವಳ ಹಣೆಯನ್ನೂ. ಅಶ್ರುಪೂರಿತ ನೇತ್ರಗಳನ್ನು ಮತ್ತೆ ಮತ್ತೆ ಚುಂಬಿಸಿದೆ. ಅವಳ ಕಣ್ಣಲ್ಲಿದ್ದ ಸಮರ್ಪಣಾಭಾವ ಕಂಡು ನನ್ನ ಹೃದಯ ಆರ್ದ್ರವಾಯಿತು. ದುಃಖ-ಸಂತೋಷಗಳ ಮಿಶ್ರ ಭಾವದಲ್ಲಿ ನನ್ನ ಕಣ್ಣೂ ತುಂಬಿತು. ಕರ್ತವ್ಯದ ವೇದಿಕೆಯಲ್ಲಿ ಆತ್ಮಾರ್ಪಣೆ ಮಾಡಿಕೊಂಡ ಉದಾತ್ತ ಚೇತನ ಇಂದು ನನ್ನದಾಗಿತ್ತು. ನಸುನಗುತ್ತಾ ಹೇಳಿದೆ. "ರಿಟೈರಾಗಲು ಇನ್ನು ಐದಾರು ವರ್ಷಗಳಿವೆ. ಮದುವೆಯ ವಯಸ್ಸು ಮೀರಿತು ಎಂದಿದ್ದೆ. ಆದರೆ ಅಮ್ಮನಿಗೆ ಇನ್ನೂ ಸೊಸೆ ತಂದುಕೊಳ್ಳುವ ವಯಸ್ಸು ಮೀರಿಲ್ಲ ಊರ್ಮಿಳಾ." ಊರ್ಮಿಳಾಳ ಮೋಡ ಮುಸುಕಿದ ಮುಖದಲ್ಲಿ ಮೂಡಿದ ನಗೆಮಿಂಚಿನಲ್ಲಿ, ನನ್ನ ಬದುಕಿಗೆ ಹೊಸ ಅರ್ಥ ಕಂಡುಕೊಂಡೆ.

# ರೆಫ್ರಿಜರೇಟರ್



"ರೆಫ್ರಿಜಿರೇಟರ್" ಎಂದೊಡನೆ ಅದು ಶ್ರೀಮಂತರ ಮನೆಯ ಸೊತ್ತು, ಶ್ರೀಮಂತರು ಮಾತ್ರ ಅದನ್ನು ಕೊಂಡುಕೊಳ್ಳುವವರು, ಮಧ್ಯಮ ವರ್ಗದವರಿಗಂತೂ ಅದನ್ನು ಕೊಂಡುಕೊಳ್ಳುವುದು ಅಸಾಧ್ಯವೆಂಬ ಕಲ್ಪನೆಯಿದ್ದ ಕಾಲವೊಂದಿತ್ತು. ಆದರೆ ದಿನಗಳುರುಳಿದಂತೆ, ಜನರಲ್ಲಿ ವೈಜ್ಞಾನಿಕತೆ ಮತ್ತು ವೈಚಾರಿಕತೆ ಬೆಳೆದು ಗೃಹ-ಸೌಕರ್ಯಗಳ ಯಾದಿಯಲ್ಲಿ ರೆಫ್ರಿಜರೇಟರ್ ಸೇರಿಕೊಂಡಿತು. ತನ್ಮೂಲಕ ವರ್ಗಭೇದವಿಲ್ಲದೆ ಜನರ ಅವಶ್ಯಕತೆಗಳಿಗನುಗುಣವಾಗಿ ಅದರ ಬಳಕೆಯಾಗತೊಡಗಿತು. ಇಂದಿನ ದಿನಗಳಲ್ಲಂತೂ ರೆಫ್ರಿಜ-ರೇಟರ್ ಕೇವಲ ಪ್ರತಿಷ್ಠೆಯ ಸಂಕೇತವಾಗಿ ಉಳಿಯದೆ, ಒಂದು ಆವಶ್ಯಕತೆಯಾಗಿಬಿಟ್ಟಿದೆ.

ಇಂದು ರೆಫ್ರಿಜರೇಟರ್ ಬಹೂಪಯೋಗಿ ಸಾಧನವೆನಿಸಿದೆ. ಆಸ್ಪತ್ರೆಗಳಲ್ಲಿ, ಹೋಟೇಲುಗಳಲ್ಲಿ, ಔಷಧಿಯ ಅಂಗಡಿಗಳಲ್ಲಿ ಹಾಗೂ ಅಡುಗೆ ಮನೆಯಲ್ಲಿ ಫ್ರಿಜ್ ಉಪಯುಕ್ತವೆನಿಸಿದೆ. ಮಹಿಳೆಯರ ಪಾಲಿಗಂತೂ ಇದರ ಬಳಕೆಯೊಂದು ವರದಾನವೇ ಸರಿ. ಅಡುಗೆ ಮನೆಯಲ್ಲಿ ಪ್ರತಿನಿತ್ಯ ಆಹಾರ ವಸ್ತುಗಳನ್ನು ಹಳಸಿ ಹಾಳಾಗದಂತೆ ತಡೆಗಟ್ಟುವುದರಿಂದ ಆರಂಭಗೊಂಡು ಆಸ್ಪತ್ರೆಗಳಲ್ಲಿ ಔಷಧಿಗಳನ್ನು ಶಕ್ತಿಯುತವಾಗಿರುವಂತೆ ಸಂಗ್ರಹಿಸಿಡುವಲ್ಲಿಯ ವರೆಗೆ ಇದರ ಸೇವಾವ್ಯಾಪ್ತಿ ಹರಡಿದೆಯೆಂದರೆ ಆಶ್ಚರ್ಯವೇ ಸರಿ. ಇದರ ಕಾರ್ಯವೈಖರಿ ಹೇಗೆ ಅದ್ಭುತವೊ ಹಾಗೇ ಇದರ ರಚನೆ ಕೂಡಾ ಊಹೆಗೆ ನಿಲುಕುವಂತಹದಲ್ಲ.

## ರಚನೆ ಮತ್ತು ಕಾರ್ಯವಿಧಾನ

ಫ್ರಿಜ್‌ನ ಒಳಗಿನ ಉಷ್ಣತೆ 4°c ಯಿಂದ 11°c (ಸೆಲ್ಸಿಯಸ್) ವರೆಗೆ ಇರುತ್ತದೆ. ಇಷ್ಟೊಂದು ಕಡಿಮೆ ಉಷ್ಣತೆ 'ರೆಫ್ರಿಜರೇಶನ್' ಎಂಬ ಕ್ರಿಯೆಯಿಂದಾಗಿ ಲಭಿಸುತ್ತದೆ. ಈ ಕ್ರಿಯೆ 'ಕಂಪ್ರೆಸರ್'ನಿಂದಾಗಿ ನಡೆಯುತ್ತದೆ. ಇದರ ಮೂಲಕ "ಫ್ರಿಯೋನ್-12" ಎಂಬ ಅನಿಲ ಪದೇ ಪದೇ ದ್ರವರೂಪದಲ್ಲಿ ಮತ್ತು ಅನಿಲ ರೂಪದಲ್ಲಿ ಪರಿವರ್ತನೆ ಆಗುತ್ತಿರುತ್ತದೆ. ಈ ಕಾರಣದಿಂದಾಗಿ ಫ್ರೀಜರ್‌ನ ಒಳಗಿನ ಉಷ್ಣತೆಯ ನೀರು ಮಂಜುಗಡ್ಡೆಯಾಗುವ ಉಷ್ಣತೆ (0°c) ಗಿಂತ ಕಡಿಮೆ ಮಟ್ಟಕ್ಕೆ ತಲುಪುತ್ತದೆ. ತಾಮ್ರದಿಂದ ತಯಾರಿಸಿದ ತೆಳುವಾದ ಕೊಳವೆಗಳಲ್ಲಿರುವ 'ಫ್ರಿಯೋನ್' ಅನಿಲ ತನ್ನ ಸ್ಥಿತಿಯನ್ನು ಬದಲಾಯಿಸಿಕೊಳ್ಳುವುದು ಕಂಪ್ರೆಸರ್‌ನ ಮೂಲಕ. ಕಂಪ್ರೆಸರ್ ಕೂಡಲೇ ದ್ರವರೂಪದ ಫ್ರಿಯೋನನ್ನು, ಅನಿಲರೂಪಕ್ಕೆ ಪರಿವರ್ತಿಸಿ ಮೇಲಿನ ಫ್ರೀಜರ್‌ನ ಕಡೆಗೆ ಕಳುಹಿಸುತ್ತಿರುತ್ತದೆ. ಆದ್ದರಿಂದ ಕಂಪ್ರೆಸರ್ ಫ್ರಿಜ್ಜಿಗೆ ಒಂದು ಹೃದಯವಿದ್ದಂತೆ.

ಪ್ರತಿಯೊಂದು ಫ್ರೀಜ್‌ನಲ್ಲಿಯೂ ಫ್ರೀಜರ್, ಯಾವಾಗಲೂ ಮೇಲ್ಭಾಗದಲ್ಲಿಯೇ ಇರುತ್ತದೆ. ಏಕೆಂದರೆ ಕೆಳಗಿಟ್ಟಿರುವ ಆಹಾರ ಪದಾರ್ಥಗಳಿಂದ ಬಿಸಿಯಾದ ಗಾಳಿಯು ಮೇಲಕ್ಕೆ ಹೋಗುತ್ತದೆ ಮತ್ತು ಫ್ರೀಜರ್‌ನ ತಣ್ಣಗಾದ ಗಾಳಿಯು ಯಾವಾಗಲೂ ಕೆಳಮುಖವಾಗಿ ಬರುತ್ತಿರುತ್ತದೆ. ಒಂದು ವೇಳೆ ಫ್ರೀಜರ್‌ನ ಉಷ್ಣತೆ 0°c ಯಿಂದ –4°c ಉಷ್ಣತೆಯಲ್ಲಿದ್ದರೆ, ಆಗ ಫ್ರೀಜರ್‌ನ ಕೆಳಭಾಗದ ಉಷ್ಣತೆ 0°c ಯಿಂದ ಸುಮಾರು 5°c ನಷ್ಟು ಇರುತ್ತದೆ.

ರೆಫ್ರಿಜಿರೇಟರುಗಳಲ್ಲಿ ಉಷ್ಣತೆಯ ನಿಯಂತ್ರಣವನ್ನು 'ಥರ್ಮೋಸ್ಟ್ಯಾಟ್'ನ ಮೂಲಕ ಮಾಡಬಹುದಾಗಿದೆ. ಇದು ಹೊರಗಿನ ಉಷ್ಣತೆಯ ಮೇಲೆ ಹೆಚ್ಚು ಅವಲಂಬಿತ. ಬೇಸಿಗೆಯ ದಿನಗಳಲ್ಲಿ ಒಳಗಿನ ಉಷ್ಣತೆಯನ್ನು ತೀರಾ ಕಡಿಮೆಗೊಳಿಸಬೇಕು. ಅಂದರೆ ಥರ್ಮೋಸ್ಟ್ಯಾಟ್‌ನ ಬಟನ್ನನ್ನು 7 ನಂಬರಿಗೆ ಅಥವಾ Maximum ಎಂದು ಬರೆದಿರುವಲ್ಲಿಗೆ ತಿರುಗಿಸಬೇಕು. ಚಳಿಗಾಲದಲ್ಲಿ ಮತ್ತು ಮಳೆಗಾಲದಲ್ಲಿ ಕೇವಲ 1 ನಂಬರಿಗೆ ಅಥವಾ Minimum ನಲ್ಲಿಟ್ಟರೂ ಸಾಕು.

ಇತ್ತೀಚೆಗೆ ರೆಫ್ರಿಜರೇಟರಿನಲ್ಲಿ ಅನೇಕ ಸುಧಾರಣೆಗಳಾಗಿವೆ. ಕೆಲವು ಡಬಲ್ ಡೋರ್ ಮಾಡೆಲ್‌ಗಳಲ್ಲಿ ಆಹಾರ ಪದಾರ್ಥಗಳನ್ನು ತೆಗೆಯುವಾಗ ಕೆಳಗಿನ ಬಾಗಿಲನ್ನು ಮಾತ್ರ ತೆಗೆದರೆ ಸಾಕಾಗುತ್ತದೆ. ಕೆಲವು ಫ್ರಿಜ್‌ನ ಬಾಗಿಲುಗಳಲ್ಲಿ ಅಯಸ್ಕಾಂತವಿದ್ದು ತನ್ನಷ್ಟಕ್ಕೇ ಮುಚ್ಚಿಕೊಳ್ಳುವ ಅನುಕೂಲವಿದೆ. ಕೆಲವೊಂದರಲ್ಲಿ ಫ್ರಿಜ್‌ನ ಜೊತೆಗೇ ವೋಲ್ಟೇಜ್ ಸ್ಟೆಬಿಲೈಸರನ್ನು ಅಳವಡಿಸಲಾಗಿರುತ್ತದೆ. ಕೆಲವು ಮಾಡೆಲ್‌ಗಳಲ್ಲಿ ಬಾಗಿಲನ್ನು ತೆರೆಯದೇ ಹೊರಗಿನಿಂದ ಬಟನ್ನನ್ನು ಒತ್ತಿದ ಕೂಡಲೇ ತಣ್ಣಗಿನ ನೀರು ಬರುವಂತೆ ವ್ಯವಸ್ಥೆ ಕೂಡಾ ಇದೆ. ತನ್ನಿಂದ ತಾನಾಗಿಯೇ ಡಿಫ್ರೋಸ್ಟ್ ಆಗುವ ವ್ಯವಸ್ಥೆ ಇರುವ ರೆಫ್ರಿಜರೇಟರ್‌ಗಳೂ ಇವೆ.

# ತಿಳಿದಿರಬೇಕಾದ ಕೆಲವು ಅಂಶಗಳು

— ಮಮತಾ ಎಸ್. ಎನ್ ದೇವ

ಫ್ರಿಜ್ ಪದೇ ಪದೇ ಖರೀದಿಸುವ ವಸ್ತುವಲ್ಲ. ಇದೊಂದು ಮಹತ್ವವಾದ ಚರ ಸೊತ್ತು. ಇದಕ್ಕಾಗಿ ಮಧ್ಯಮ ವರ್ಗದವರು ಉಳಿತಾಯ ಮಾಡುವುದು ಹಾಗೂ ಯೋಜನೆ ಹಾಕಿಕೊಳ್ಳುವುದು ಅಗತ್ಯ. ಫ್ರಿಜ್ ಖರೀದಿಸುವ ಮೊದಲು ಈ ಕೆಲವೊಂದು ಅಂಶಗಳನ್ನು ನೆನಪಿಡುವುದು ಒಳ್ಳೆಯದು–

- ಕಂಪ್ರೆಸ್ಸರ್ ಸರಿಯಾಗಿ ಕಾರ್ಯ ನಿರ್ವಹಿಸುವುದೇ ಎಂದು ಪರೀಕ್ಷಿಸಿಕೊಳ್ಳುವುದು. (ಇದೀಗ ಎರಡು ಕಂಪ್ರೆಸ್ಸರ್ ಇರುವ ಫ್ರಿಜ್‌ಗಳೂ ಸಿಗುತ್ತವೆ)
- ಒಳ್ಳೆಯ ಕಂಪೆನಿಯದ್ದಾದರೆ ಉತ್ತಮ.
- ಸ್ವಯಂಚಾಲಿತ ವೋಲ್ಟೇಜ್ ಸ್ಟೆಬಿಲೈಸರ್ ಅಳವಡಿಸಲ್ಪಟ್ಟಿದ್ದರೆ ಒಳ್ಳೆಯದು.
- ಸ್ವಯಂಚಾಲಿತ ಅಥವಾ ಕೂಡಲೇ ಡಿಫ್ರೋಸ್ಟ್ ಆಗುವ ವ್ಯವಸ್ಥೆ ಇದ್ದರೆ ಅನುಕೂಲ.
- ಇನ್‌ಸುಲೇಶನ್‌ನ ಸರಿಯಾದ ವ್ಯವಸ್ಥೆ ತೀರಾ ಅವಶ್ಯ.
- ಫ್ಯೂಸ್ ಅಥವಾ ಕಟ್‌ಔಟ್‌ನ ಒಳ್ಳೆಯ ವ್ಯವಸ್ಥೆಯೂ ಅಷ್ಟೇ ಅಗತ್ಯವಾದುದು.

## ಫ್ರಿಜ್‌ನ್ನು ಚಾಲೂ ಮಾಡುವ ಮುನ್ನ ಗಮನಿಸಬೇಕಾದ ಅಂಶಗಳು

- ಯಾವಾಗಲೂ ವೋಲ್ಟೇಜ್ ಸ್ಟೆಬಿಲೈಸರ್‌ನೊಂದಿಗೇ ಚಾಲೂ ಮಾಡಬೇಕು. ಇಲ್ಲದಿದ್ದಲ್ಲಿ ಕಂಪ್ರೆಸ್ಸರ್ ಉರಿದು ಹೋಗುವ ಸಂಭವವಿದೆ.
- ಬಿಸಿಯಾದ ಗಾಳಿಯು ಸುಲಭವಾಗಿ ಹೊರಗೆ ಹೋಗುವಂತಹ "ಕ್ರಾಸ್ ವೆಂಟಿಲೇಶನ್" ಇರುವ ಕೋಣೆಯು ಫ್ರಿಜ್ ಇಡಲು ಯೋಗ್ಯ. ಇದಲ್ಲದೆ ಕೋಣೆಯು ಹೆಚ್ಚು ಬಿಸಿ ಇರದೆ, ಧೂಳು, ಕಸ, ಹೊಗೆ ಇತ್ಯಾದಿಗಳಿಂದ ಕೂಡಿರಬಾರದು.
- ಅವಶ್ಯಕತೆಗಿಂತ ಹೆಚ್ಚಾಗಿ ಫ್ರಿಜ್‌ನಲ್ಲಿ ಮಿತಿಮೀರಿ ತುಂಬಿಸಿಡಲು ಯತ್ನಿಸಬಾರದು. ಬಿಸಿಯಾದ ಹಾಲು ಅಥವಾ ಇನ್ನಿತರ ಬಿಸಿ ವಸ್ತುಗಳನ್ನಿಡಬಾರದು.
- ಫ್ರಿಜ್ಜನ್ನು ನೆಲದಿಂದ ಸುಮಾರು ನಾಲ್ಕು ಇಂಚು ಎತ್ತರವಿರುವ ಮರದ ಹಲಗೆಗಳ ಮೇಲಿಟ್ಟರೆ ಕೆಳಭಾಗ ಸ್ವಚ್ಛ ಮಾಡಲು ಅನುಕೂಲ.
- ವಿದ್ಯುತ್ತಿನ ಯಾವುದೇ ಸಂಪರ್ಕ ಸಡಿಲವಾಗಿರಬಾರದು.

## ಫ್ರಿಜ್ ಚಾಲೂ ಮಾಡಿದ ನಂತರ ಗಮನಿಸಬೇಕಾದ ಕೆಲವು ಅಂಶಗಳು

- ಫ್ರಿಜ್ಜಿನ ಬಾಗಿಲನ್ನು ಆಗಾಗ್ಗೆ ತೆರೆಯುವುದು ಒಳ್ಳೆಯದಲ್ಲ.
- ವಾತಾವರಣದ ಉಷ್ಣತೆಯನ್ನವಲಂಬಿಸಿ ಥರ್ಮೋಸ್ಟ್ಯಾಟ್ ಬಟನ್‌ನ್ನು ಬೇಕಾದ ಉಷ್ಣತೆಗೆ ಸರಿಹೊಂದಿಸಿಕೊಳ್ಳಬೇಕು.
- ಆಗಾಗ್ಗೆ ಹೊರಗಿನ ಆರ್ದ್ರತೆ ಮತ್ತು ತರಕಾರಿ, ಹಣ್ಣುಗಳಿಂದ ಹೊರಡುವ ತೇವಾಂಶ ಫ್ರೀಜರ್‌ನ ಸೂಕ್ಷ್ಮವಾದ ಕೊಳವೆಗಳ ನಾಲ್ಕೂ ಬದಿಗಳಲ್ಲಿ ತಣ್ಣಗಾಗಿ ಮಂಜುಗಡ್ಡೆಯಾಗಿ ಶೇಖರವಾಗುತ್ತದೆ. ಫ್ರೀಜರ್‌ನಲ್ಲಿ ಮಳೆಗಾಲದಲ್ಲಂತೂ ಬಹಳ ಬೇಗ ನೀರು ಗಟ್ಟಿಯಾಗುತ್ತದೆ. ಇದರಿಂದಾಗಿ ಫ್ರೀಜರಿನಲ್ಲಿ ಮಂಜುಗಡ್ಡೆಯಾಗುವಿಕೆ ನಿಂತುಹೋಗುತ್ತದೆ. ಈ ಸಂದರ್ಭಗಳಲ್ಲಿ ರಾತ್ರಿಯಿಡೀ ಫ್ರಿಜ್ಜನ್ನು ಬಂದ್‌ಮಾಡಿ ಡಿಫ್ರೋಸ್ಟ್ ಮಾಡುವುದು ತೀರಾ ಅಗತ್ಯ.
- ಫ್ರಿಜ್‌ನ ಒಳಗೆ ಪರಿಮಳವಿರುವ ವಸ್ತುಗಳನ್ನು ಪಾಲಿಥೀನ್ ಚೀಲಗಳಲ್ಲಿ ತುಂಬಿಸಿ ಇಡಬೇಕು. ತರಕಾರಿಗಳನ್ನೂ ಪಾಲಿಥೀನ್ ಚೀಲಗಳಲ್ಲಿಯೇ ಕಟ್ಟಿ ಇಡಬೇಕು. ಇಲ್ಲದಿದ್ದರೆ ಅವುಗಳ ತಾಜಾತನ ಹೆಚ್ಚು ಹೊತ್ತು ಉಳಿಯುವುದಿಲ್ಲ.
- ಕೊಳೆತ ತರಕಾರಿ, ಹಣ್ಣು ಅಥವಾ ಆಹಾರ ವಸ್ತುಗಳನ್ನು ಫ್ರಿಜ್‌ನಲ್ಲಿಡಬಾರದು.
- ಫ್ರೀಜರ್‌ನ್ನು ಸಮಯಕ್ಕೆ ಸರಿಯಾಗಿ ಡಿಫ್ರೋಸ್ಟ್ ಮಾಡಿ ಆಗಾಗ್ಗೆ ಮೃದುವಾದ ಬಟ್ಟೆಯಿಂದ ಒರೆಸಿ ಶುಚಿಯಾಗಿಟ್ಟುಕೊಂಡರೆ ಐಸ್ ಟ್ರೇಯನ್ನು ತೆಗೆಯುವಾಗ ಹೆಚ್ಚು ಕಷ್ಟವಾಗಲಾರದು.

ಈ ಎಲ್ಲಾ ವಿಷಯಗಳನ್ನು ಮತ್ತು ರೆಫ್ರಿಜರೇಟರನ್ನು ಕೊಂಡುಕೊಳ್ಳುವಾಗ ದೊರಕುವ ಸೂಚನಾಕ್ರಮಗಳನ್ನು ಸರಿಯಾಗಿ ಅನುಸರಿಸಿದಲ್ಲಿ ರೆಫ್ರಿಜಿರೇಟರ್ ದೀರ್ಘಕಾಲ ಬಾಳಿಕೆ ಬರುವುದರಲ್ಲಿ ಸಂದೇಹವಿಲ್ಲ. *



ಮಿನಿ ಕತೆ:



# ಸ್ನೇಹ

—ಕೆ. ವಿ. ರಾಜೇಶ್ವರಿ

"ಏ ಮೀನಾ, ಮೂರು ಹೊತ್ತೂ ಅದೇನು ಸುತ್ತುತ್ತಾ ಇರ್ತೀಯೇ ಫ್ರೆಂಡ್ಸ್ ಫ್ರೆಂಡ್ಸ್ ಅಂತ, ಅವರಿಗೆ ಇವರಿಗೆ ಉಪಕಾರ ಮಾಡ್ಕೊಂಡು. ಯಾಕೆ ಈ ಪ್ರಪಂಚದಲ್ಲಿ ಉಪಕಾರ ಮಾಡೋವ್ರು ಬೇರೆ ಯಾರೂ ಇಲ್ಲವೇನು ? ನಿನ್ನ ತಲೆಗೇ ಅಂಟಿ ಕೊಂಡಿದಿಯಾ, ನಿನ್ನ ಸ್ನೇಹಿತರಿಗೆಲ್ಲಾ ಸಹಾಯ ಮಾಡೋ ಕೆಲ್ಸ."

"ಅಮ್ಮಾ, ನಿನಗೇನು ಗೊತ್ತು ಸ್ನೇಹಿತರಿಗೆ ಸಹಾಯ ಮಾಡೋದ್ರಲ್ಲಿ ಎಂತಹ ತೃಪ್ತಿ ಸಿಗುತ್ತೆ ಅಂತ. ಯಾರೋ ಒಬ್ಬ ಕವಿ ಹೇಳಿದಾನೆ, ಒಬ್ಬ ಒಳ್ಳೆಯ ಸ್ನೇಹಿತ ಇದ್ದರೆ ಎಲ್ಲಾ ಇದ್ದ ಹಾಗೆ ಅಂತ..."

"ನಿನ್ನ ತಲೆ, ಹುಡುಗಿಯರು ಅಂದ್ರೆ ಎಲ್ಲಾದ್ರೂ ಹೋಗಲಿ. ಹುಡುಗರ ಹತ್ತಿರ ಎಲ್ಲಾ ಏನೇ ನಿನ್ನ ಸ್ನೇಹ ?"

"ಅಮ್ಮಾ ಸ್ನೇಹಕ್ಕೆ ಹುಡುಗ-ಹುಡುಗಿ ಅಂತ ಭೇದ ಯಾಕಮ್ಮ ?"

"ನೀನೇನೋ ಹಾಗನ್ನಬಹುದು. ಆದರೆ ನೋಡಿದವರು ಏನಂತಾರೆ ಹೇಳು ?"

"ಯಾರು ಏನಂದ್ರೆ ನನಗೇನಮ್ಮ ? ಅವರ ಮಾತುಗಳನ್ನೆಲ್ಲಾ ಲೆಕ್ಕಕ್ಕಿಟ್ರೆ ತಾನೇ ನಾನು. ಒಂದು ಹೆಣ್ಣು ಒಂದು ಗಂಡು ಸ್ನೇಹದಿಂದ ಇದ್ದರೆ ಅವರ ಮಧ್ಯೆ ಏನಾದ್ರೂ ಸಂಬಂಧ ಇರಬೇಕು ಅಂತೇನಿಲ್ಲ. ನನಗೆ ಅಣ್ಣ ತಮ್ಮಂದಿರಿಲ್ಲವೇ ? ಹಾಗೇ ಅವರೂ. ಇಷ್ಟಕ್ಕೂ ಅನ್ನೋ ಜನರ ಬಾಯಿ ಮುಚ್ಚೋಕೆ ಸಾಧ್ಯವೇ ಹೇಳು."

"ನಿನಗೇನು ಹೇಳಿಬಿಡ್ತೀಯಾ. ಕ್ಲಬ್‌ಗೆ ಹೋದಾಗ ಅವರಿವರು ಒಡಕು ಮಾತಾಡೋದು ಕೇಳಿದ್ರೆ ಕೆಡುಕನ್ನಿಸುತ್ತೆ."

"ಅಂದ್ರೆ ! ನಿಮ್ಮ ಕ್ಲಬ್ಬಿನಲ್ಲಿ ನಡೆಯೋದು ಇಂತಹ ಮಾತುಗಳೇನಾ ? ಹೊಟ್ಟೆ ತುಂಬಿದವರಿ

ಗೆಲ್ಲಾ ಬೇರೆ ಯೋಚನೆ ಏನುರುತ್ತೆ ಹೇಳು. ಅದಕ್ಕೇ ನಾನು ಹೇಳೋದು. ನಾಲ್ಕು ಜನ ಕೆಟ್ಟ ಜನರೊಡನೆ ಮಾತಾಡೋದಕ್ಕಿಂತಾ ಒಂದು ಒಳ್ಳೆಯ ಪುಸ್ತಕ ಓದೋದು ಒಳ್ಳೆಯದು ಅಂತ. ಪುಸ್ತಕಕ್ಕಿಂತಾ ಒಳ್ಳೆಯ ಸ್ನೇಹಿತ ಯಾರೂ ಇಲ್ಲ ಗೊತ್ತಾಯ್ತಾ ?"

"ಆದ್ರೆ ?"

"ಅಮ್ಮಾ, ಆದ್ರೆ ಅಂತ ನೀನೇನೂ ಹೆದರ ಬೇಡ. ಹುಡುಗರ ಜೊತೆ ಸ್ನೇಹ ಇದ್ರೂ ನಾನು ಹಾದಿ ತಪ್ಪೋ ಅಂತ ಹುಡುಗಿ ಅಲ್ಲ. ನೀನು ನಿಶ್ಚಿಂತೆಯಾಗಿರು. ಮತ್ತು ಅವರಿವರು ಹೇಳೋ ಮಾತುಗಳ ಬಗ್ಗೆ ತಲೆ ಕೆಡಿಸಿಕೊಳ್ಳೋದು ಬಿಟ್ಟು ಬಿಡು."

* * *

"ಏನ್ರಿ, ಮೀನಾಗೆ ನೀವಾದ್ರೂ ಸ್ವಲ್ಪ ಬುದ್ಧಿ ಹೇಳಬಾರದೇ ?"

"ಯಾಕೇ ? ಏನಾಯ್ತು ? ಬುದ್ಧಿ ಹೇಳಿಸಿ-ಕೊಳ್ಳೋ ಸ್ಥಿತಿಯಲ್ಲಿ ಇಲ್ಲವಲ್ಲ ನಮ್ಮ ಮೀನಾ."

"ನೀವು ಹೀಗನ್ಕೊಂಡೇ ಇರಿ. ಅವಳು ಹುಡುಗರು ಹುಡುಗಿಯರು ಅನ್ನದೆ ಯಾರ್‍ಯಾರ ಜೊತೆಯಲ್ಲೋ ಸ್ನೇಹ ಮಾಡ್ತಿದಾಳೆ. ಯಾವತ್ತೋ ಒಂದು ದಿನ ಯಾವನನ್ನಾದ್ರೂ ಕಟ್ಕೊಂಡು ಓಡಿ ಹೋಗ್ತಾಳೆ..."

"ನಮ್ಮ ಮೀನಾ ಅಂತಹವಳು ಅಂತ ನನಗನ್ನಿಸೋದಿಲ್ಲ..."

"ಏನಾದ್ರೂ ಕೆಟ್ಟ ಹೆಸರು ಬರೋಹಾಗಾದ್ರೂ ಮಾಡ್ತಾಳೇನೋ ! ಹುಡುಗರ ಜೊತೆ ಸ್ನೇಹ ವಿದ್ದಾಗ ಯಾವ ಕಾಲಕ್ಕೆ ಏನಾಗುತ್ತೋ, ಅವರ ಮನಸ್ಸು ಹೇಗೆ ತಿರುಗುತ್ತೋ ಹೇಗೆ ಹೇಳೋ-ದಿಕ್ಕಾಗುತ್ತೆ. ಏನಾದ್ರೂ ಆಗಬಾರದ್ದು ಆದರೆ ಅಂತ ನನ್ನ ಭಯ ಅಷ್ಟೇ. ಬೆಂಕಿಯ ಕಾವಿಗೆ ಎಂತಹ ಬೆಣ್ಣೆ ಆದರೂ ಕರಗುತ್ತೆ."

"ನೋಡು ಬೆಂಕಿ-ಬೆಣ್ಣೆ ಅನ್ನೋದೆಲ್ಲಾ ನಿನ್ನ ತಪ್ಪು ತಿಳುವಳಿಕೆ ಅಷ್ಟೇ. ಈಗಿನ ಕಾಲದ ಹುಡುಗಿಯರು ನಿಮ್ಮ ಕಾಲದವರ ಹಾಗಲ್ಲ. ಎಲ್ಲ ರೀತಿಯಿಂದಲೂ ಎಚ್ಚೆತ್ತುಕೊಂಡಿದ್ದಾರೆ. ವಿದ್ಯಾವಂತೆಯರಾಗಿದ್ದಾರೆ. ಯಾವುದು ತಪ್ಪು ಯಾವುದು ಸರಿ ಅಂತ ಯೋಚನೆ ಮಾಡೋ ಸ್ಥಿತಿ ತಲುಪಿದ್ದಾರೆ. ನಮ್ಮ ಮೀನಾಗೆ ತನ್ನ ಜವಾಬ್ದಾರಿ ಏನು ಅಂತ ಚೆನ್ನಾಗಿಗೊತ್ತು. ಅವಳ ಬಗ್ಗೆ ನೀನೇನೂ ಯೋಚನೆ ಮಾಡ್ಬೇಡ."

"ಹೆತ್ತ ಹೊಟ್ಟೆಯ ಚಿಂತೆ ನಿಮಗೇನು ಗೊತ್ತಾಗ ಬೇಕು. ನಾಳೆ ಏನಾದ್ರೂ ಹೆಚ್ಚು ಕಡಿಮೆ ಆದ್ರೆ ಮಾತ್ರ ಅದಕ್ಕೆ ಜವಾಬ್ದಾರಿ ನೀವೇ, ನೆನಪಿಟ್ಟುಕೊಳ್ಳಿ" ಸಿಟ್ಟಿನಿಂದ ಎದ್ದುಬಿಟ್ಟಳು.

ಪತ್ನಿಯ ಸಿಟ್ಟಿನಿಂದ, ಮುಖದಲ್ಲಿ ಮುಗುಳ್ನಗೆ ತೋರಿತು ಮೀನಳ ತಂದೆಗೆ.

* * *

"ಏನು ಹೇಳ್ತಾರೆ ಅಮ್ಮನವರು ಈಗ ? ಯಾವತ್ತೋ ಯಾರನ್ನೋ ಕಟ್ಕೊಂಡು ಮೀನಾ ಓಡಿ ಹೋಗ್ತಾಳೆ ಅಂತಿದ್ರಲ್ಲಾ..."

"ಸಾಕ್ರೀ ನಿಮ್ಮ ಹಾಸ್ಯ. ಮಗಳು ಎಲ್ಲಿ ಹಾದಿ ತಪ್ತಾಳೋ, ಅವಳ ಬಾಳು ಎಲ್ಲಿ ಹರಿದು ಚಿಂದಿಯಾಗುತ್ತೋ ಅನ್ನೋ ಚಿಂತೆ ನನ್ನ ತಲೆ ತಿಂತಿತ್ತು. ಅದಕ್ಕೇ ನಾನು ಹಾಗಂದಿದ್ದು."

ಅಷ್ಟರಲ್ಲಿ ಮದುಮಗಳು ಮೀನಾ ಅಲ್ಲಿಗೆ ಬಂದಳು.

"ಏನು ಅಪ್ಪ ಅಮ್ಮ ಏನೋ ರಹಸ್ಯವಾಗಿ ಮಾತಾಡ್ತಿದೀರಲ್ಲ."

- "ಏನಿಲ್ಲ, ನಿಮ್ಮಮ್ಮ ನಿನ್ನ ಬಗ್ಗೆ ಹೇಗೆ ಭಯಪಟ್ಟಳು ಅಂತ ರೇಗಿಸ್ತಾ ಇದ್ದೆ."

"ಅದೇನಪ್ಪಾ ಅಂತಹ ಭಯ."

ಎಲ್ಲ ವಿಷಯವನ್ನೂ ತಂದೆ ಹೇಳಿದಾಗ ಮೀನಾ ನಕ್ಕು ಬಿಟ್ಟಳು. "ಅಪ್ಪ, ಎಲ್ಲ ತಂದೆ ತಾಯಿಗೂ ಇರೋ ಭಯವೇ ಅಮ್ಮನಿಗೂ ಬಂದಿದ್ದು ವಿಚಿತ್ರವೇನಲ್ಲ. ತಮ್ಮ ಹೆಣ್ಣು ಮಕ್ಕಳಲ್ಲಿ ನಂಬಿಕೆ ಇಲ್ಲದಿರೋದೇ ಈ ಭಯಕ್ಕೆ ಕಾರಣ. ಹೆಣ್ಣು ಹಿಂದಿನ ಹಾಗೆ ಅಬಲೆಯಲ್ಲ, ಎಚ್ಚೆತ್ತು ಕೊಂಡಿದ್ದಾಳೆ. ಅವಳನ್ನ ನಂಬಿ, ಎಚ್ಚರಿಸಿ ಅವಳಿ ಗೊಂದು ಅವಕಾಶ ಕೊಡಬೇಕೇ ವಿನಹಾ, ಅವಳ ಆಸಕ್ತಿಗಳನ್ನ ಕುಂಠಿಸಬಾರದು. ಕೆಟ್ಟುಹೋಗೋರು ನಾಲ್ಕು ಗೋಡೆಗಳ ನಡುವೆ ಬಂಧಿಸಿಟ್ಟರು, ಕೆಟ್ಟು ಹೋಗ್ತಾರೆ. ಅದನ್ನ ತಡೆಯೋಕೆ ಸಾಧ್ಯ ವಿಲ್ಲ..." ಎಂದು ಅಮ್ಮನ ಕಡೆ ತಿರುಗಿದಳು.

"ಅಮ್ಮಾ, ಹುಡುಗರ ಜೊತೆ ನನ್ನ ಸ್ನೇಹ ಸರಿಯಲ್ಲ ಅಂತ ನೀನು ಹೇಳ್ತಾ ಇದ್ದೆಯಲ್ಲಾ. ಒಬ್ಬರ ಜೊತೆ ನಾವು ಸ್ನೇಹ ಮಾಡಿದಾಗ, ಅದು ಹುಡುಗನಾಗಲಿ ಹುಡುಗಿಯಾಗಲಿ, ಅದು ಸ್ನೇಹವೇ ಹೊರತು ಕಾಮಕ್ಕೆ ಅಲ್ಲಿ ಜಾಗವಿಲ್ಲ. ಮನೆಯಲ್ಲಿ ನಮ್ಮ ಅಣ್ಣ ತಮ್ಮಂದಿರ ಬಗ್ಗೆ ಅಂತಹ ಭಾವನೆ ಬರುತ್ತೆಯೇ ? ಹಾಗೆಯೇ ಸ್ನೇಹಿತರು ಕೂಡಾ. ಸ್ನೇಹಕ್ಕೆ ಹೆಣ್ಣು-ಗಂಡೆಂಬ ಭೇದವಿಲ್ಲ. ಒಬ್ಬರನೊಬ್ಬರು ಎಷ್ಟರಮಟ್ಟಿಗೆ ಅರ್ಥಮಾಡಿಕೊಳ್ಳುತ್ತಾರೆ, ಕಷ್ಟಕಾಲದಲ್ಲಿ ಹೇಗೆ ಒತ್ತಾಸೆಯಾಗಿ ನಿಲ್ಲುತ್ತಾರೆ ಅನ್ನೋದೇ ಮುಖ್ಯ. ತನ್ನ ಕಷ್ಟಸುಖಗಳಲ್ಲಿ ಧೈರ್ಯಕೊಟ್ಟು, ಜೊತೆಗೆ ನಿಂತು ಒತ್ತಾಯಿಸೆಯಾಗಿರೋ ಗೆಳೆಯರನ್ನ ಪಡೆದಿದ್ದವನು ಕೋಟ್ಯಂತರ ರೂಪಾಯಿ ಹೊಂದಿದ ಶ್ರೀಮಂತನಷ್ಟೇ ಅದೃಷ್ಟವಂತ. ಅದಕ್ಕೆ ಹೇಳೋದು ಸ್ನೇಹ ಅತಿ ಮಧುರ ಅಂತ" ಎಂದು ಹೇಳುತ್ತಿರುವ ಮಗಳನ್ನು ನೋಡಿ, ಅವಳೆಷ್ಟು ಬೆಳೆದುಬಿಟ್ಟಿದ್ದಾಳೆಂದು ಅಚ್ಚರಿಯಿಂದ ನೋಡುತ್ತಾ ನಿಂತಳು ತಾಯಿ. ●

## ಉಬ್ಬಸ ರೋಗವು ಬರುವುದೇಕೆ ?

ದಮ್ಮು, ಉಬ್ಬಸ ಮುಂತಾಗಿ ಕನ್ನಡದಲ್ಲಿ ಕರೆಯಲ್ಪಡುವ ಈ ರೋಗಕ್ಕೆ ಹಲವಾರು ವೈದ್ಯ ಪದ್ಧತಿಗಳಲ್ಲಿ ಚಿಕಿತ್ಸೆಗಳನ್ನು ತಿಳಿಸಿದ್ದರೂ ಖಚಿತವಾದ ಕಾರಣಗಳನ್ನು ಹುಡುಕಲು ಸಾಧ್ಯವಾಗಿಲ್ಲ. ಈ ರೋಗಕ್ಕೆ ಸಾಮಾನ್ಯವಾಗಿ ಯಾವುದೋ ಒಂದು ವಸ್ತುವಿನ ಹೊಂದದಿರುವಿಕೆ ( ಅಲರ್ಜಿ ) ಯೇ ಕಾರಣ ಎಂದು ತಿಳಿಯಲ್ಪಟ್ಟರೂ ಪ್ರತಿಯೊಬ್ಬ ವ್ಯಕ್ತಿಗೆ ಈ ಕಾರಣ ಭಿನ್ನ ಭಿನ್ನವಾಗಿಯೇ ಇರುತ್ತದೆ. ಈ ದಿಸೆಯಲ್ಲಿ ಭಾರತೀಯ ಪುರಾತನ ವೈದ್ಯ ಪದ್ಧತಿಯಾದ ಆಯುರ್ವೇದದಲ್ಲಿ ಉಬ್ಬಸ ರೋಗಕ್ಕೆ ಕಾರಣಗಳನ್ನು ವಿವರವಾಗಿ ವರ್ಣಿಸಲಾಗಿದೆ. ಈ ಕಾರಣಗಳನ್ನು ತಿಳಿದುಕೊಂಡು ಅದರಂತೆ ವರ್ತಿಸಿದರೆ ಉಬ್ಬಸ ರೋಗಿಯು ರೋಗದಿಂದ ಮುಕ್ತನಾಗಬಲ್ಲ.

ದಮ್ಮು ರೋಗಕ್ಕೆ ಆಯುರ್ವೇದ ಶಾಸ್ತ್ರದಲ್ಲಿ ಅನೇಕ ಕಾರಣಗಳನ್ನು ವಿವರಿಸಿದ್ದಾರೆ. ಈ ಕಾರಣಗಳನ್ನು ಆಹಾರ ಸಂಬಂಧೀ ಹಾಗೂ ವಿಹಾರ ಸಂಬಂಧಿಗಳೆಂದು ಎರಡು ವಿಧವಾಗಿ ವಿಂಗಡಿಸಬಹುದಾಗಿದೆ. ಮೊದಲನೆಯದಾಗಿ ಆಹಾರದಿಂದ ಬರುವ ದಮ್ಮು ರೋಗದ ಕಾರಣಗಳನ್ನು ವಿಚಾರ ಮಾಡೋಣ.

ನಮ್ಮ ಶರೀರದಲ್ಲಿ ಹೆಚ್ಚು ದಾಹ, ಉಷ್ಣತೆಯನ್ನು ಉಂಟುಮಾಡುವ ಉಷ್ಣಪದಾರ್ಥಗಳನ್ನು ಸೇವಿಸಿದಾಗ, ಹೆಚ್ಚು ಖಾರ, ಹುಳಿ, ಉಪ್ಪು-ಈ ರುಚಿಯುಳ್ಳ ಆಹಾರವನ್ನು ಸೇವಿಸಿದಾಗ ನಮ್ಮ ಜೀರ್ಣಶಕ್ತಿಯು ಹದಗೆಡುತ್ತದೆ. ಹೀಗೆ ಹದಗೆಟ್ಟ ಪಿತ್ತವು ತನ್ನ ಸ್ಥಾನದ ಬಳಿಯಲ್ಲೇ ಇರುವ ವಾಯುವನ್ನೂ ದೂಷಿತಗೊಳಿಸುತ್ತದೆ. ಈ ರೀತಿಯಾಗಿ ಪ್ರಕೋಪಗೊಂಡ ವಾಯುವು ಊರ್ಧ್ವಗತಿಯಲ್ಲಿ ವಿಮಾರ್ಗಗಮನವಾಗುವುದರಿಂದ ಶ್ವಾಸವುಂಟಾಗುತ್ತದೆ. ಇದಕ್ಕೆ ಉದಾಹರಣೆಗಳೆಂದರೆ ಅವರೆಕಾಯಿ, ಮೆಣಸಿನಕಾಯಿ, ಇತ್ಯಾದಿ.

ಹೆಚ್ಚು ಗುರು ಗುಣವುಳ್ಳ ಆಹಾರ ಸೇವಿಸಿದಾಗ ನಮ್ಮ ಶರೀರದಲ್ಲಿ ಗುರುಗುಣ ವೃದ್ಧಿಯಾಗುವುದರಿಂದ ಕಫ ವೃದ್ಧಿಯಾಗಿ ಅದು ಪುಪ್ಪುಸದಲ್ಲಿ ಶೇಖರಣೆಯಾಗುತ್ತದೆ. ಇದರಿಂದ ದಮ್ಮು ಬರುತ್ತದೆ. ಉದಾಹರಣೆಗೆ ಕುಂಬಳಕಾಯಿ, ಸೌತೆಕಾಯಿ, ಬೆಂಡೆಕಾಯಿ, ಮೊಸರು ಇತ್ಯಾದಿ.

ಮಲಬದ್ಧತೆಯನ್ನುಂಟುಮಾಡುವ ಆಹಾರಗಳನ್ನು ಸೇವಿಸಿದಾಗಲೂ ಸಹ ವಾತದ ಪ್ರಾಕೃತ ಗತಿಯು ತಡೆಯಲ್ಪಟ್ಟು ಅದು ಊರ್ಧ್ವಪ್ರವೃತ್ತಿಯಾಗಿ, ಆ ಕಾರಣದಿಂದ ದಮ್ಮು ಬರುತ್ತದೆ.

ಎದೆಯಲ್ಲಿ ಒತ್ತಿದ ಹಾಗಾಗುವುದು, ಮುಂತಾದ ತೊಂದರೆಗಳಾಗುತ್ತವೆ. ಉದಾಹರಣೆಗೆ – ಹೆಸರು, ತೊಗರಿ, ಇತ್ಯಾದಿ.

ಜಿಡ್ಡಿಲ್ಲದ ( ಒಣಗಿದ ) ಆಹಾರವನ್ನು ಸೇವಿಸುವುದರಿಂದ ನಮ್ಮ ದೇಹದಲ್ಲಿ ರೂಕ್ಷತೆ ಹೆಚ್ಚಾಗಿ ವಾತವು ಪ್ರಕೋಪಗೊಳ್ಳುತ್ತದೆ. ಇದರಿಂದ ಶ್ವಾಸ ಕ್ರಿಯೆಯು ಅಸ್ತವ್ಯಸ್ತಗೊಂಡು ದಮ್ಮು ಕಾಣಿಸಿಕೊಳ್ಳುತ್ತದೆ. ಉದಾಹರಣೆಗೆ–ಜವೆಗೋಧಿ, ಹೆಸರು.

ತಂಪು ಪಾನೀಯಗಳಾದ ಪಾನಕಗಳು, ತಂಗಳು ಆಹಾರ, ಐಸ್‌ಕ್ರೀಮ್ ಇತ್ಯಾದಿಗಳನ್ನು ಸೇವಿಸುವುದೂ ಸಹ ದಮ್ಮಿಗೆ ಕಾರಣವಾಗಬಹುದು.

ವಿಹಾರ ಸಂಬಂಧೀ ಕಾರಣಗಳೆಂದರೆ– ಹವಾ ನಿಯಂತ್ರಿತ ಕೋಣೆಗಳಲ್ಲಿರುವುದು, ತಣ್ಣನೆಯ ಗಾಳಿಗೆ ಮೈಯೊಡ್ಡಿರುವುದು, ಹೆಚ್ಚಾಗಿ ಧೂಳು, ಹೊಗೆ ಇರುವ ಸ್ಥಳಗಳಲ್ಲಿ ಇರುವುದು, ಬಿಸಿಲಿನಲ್ಲಿ ತಿರುಗಾಡುವಿಕೆ, ಶಕ್ತಿ ಮೀರಿ ವ್ಯಾಯಾಮ ಮಾಡುವುದು, ಹೆಚ್ಚಾಗಿ ಭಾರವುಳ್ಳ ವಸ್ತುಗಳನ್ನು ಎತ್ತುವುದು, ತೇಗು ಬರುವುದನ್ನು ತಡೆಯುವುದು, ಮತ್ತು ಶರೀರದ ಕ್ಷೀಣತೆಯನ್ನು ಹೊಂದುವುದು-ಇವುಗಳಿಂದಲೂ ಸಹ ದಮ್ಮು ರೋಗ ಬರುವುದೆಂದು ನಮ್ಮ ಗ್ರಂಥಗಳಲ್ಲಿ ತಿಳಿಸಿರುತ್ತಾರೆ.

"ಕೆಸರನ್ನು ಮುಟ್ಟಿ ಕೈ ತೊಳೆದುಕೊಳ್ಳುವ ಬದಲಾಗಿ ಮುಟ್ಟದಿರುವುದೇ ಮೇಲು" ಎಂಬ ಗಾದೆಯಂತೆ ಹಿಂದೆ ತಿಳಿಸಿದ ಕಾರಣಗಳಿಂದ ದೂರವಾಗಿ ಉಬ್ಬಸರೋಗದ ಉಪಟಳವನ್ನು ಹತ್ತಿಕ್ಕುವುದು ಜಾಣತನವಲ್ಲವೇ ?

**—ಡಾ|| ಅರುಣಾ ಎಂ. ವಿ.**

# ಕಿರುತೆರೆ, ಚಿತ್ರರಂಗದ ಅಪರೂಪದ ಜೋಡಿ

ದೂರದರ್ಶನದ ಹಲವಾರು ಧಾರಾವಾಹಿಗಳು ಹಾಗೂ ಕನ್ನಡ ಚಿತ್ರಗಳಲ್ಲಿ ಪೋಷಕ ಪಾತ್ರಗಳಲ್ಲಿ ಜತೆಯಾಗಿ ಹಾಗೂ ಬೇರ ಬೇರೆಯಾಗಿ ಕಾಣಿಸಿಕೊಳ್ಳುತ್ತಿರುವ ದಂಪತಿಗಳು ಶ್ರೀಮತಿ ಸರೋಜಾ ಹಾಗೂ ಅವರ ಪತಿ ಶ್ರೀಶೈಲನ್. ಜತೆಗೆ ಶ್ರೀಮತಿ ಸರೋಜಾ ಆಕಾಶವಾಣಿ ಹಾಗೂ ದೂರದರ್ಶನದ ಗಾಯಕಿಯೂ ಹೌದು. ಶ್ರೀಶೈಲನ್ ಸುಮಾರು 150 ಕ್ಕೂ ಹೆಚ್ಚು ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಆದರೆ ಕಲೆ ರಕ್ತಗತವಾಗಿ ಹರಿಯುತ್ತಿರುವ ಈ ದಂಪತಿಗಳಿಗೆ ಚಿತ್ರರಂಗದಲ್ಲಿ ಸೂಕ್ತ ಪ್ರೋತ್ಸಾಹ ದೊರೆತಿಲ್ಲ ಎಂದೇ ಹೇಳಬಹುದು. ಈ ದಂಪತಿಗಳ ಪರಿಚಯವನ್ನು



ಈ ಸಂದರ್ಶನದ ಮೂಲಕ ಮಾಡಿಕೊಡುತ್ತಿದ್ದೇವೆ.

● ನೀವು ಎಷ್ಟು ಚಿತ್ರಗಳಲ್ಲಿ ಅಭಿನಯಿಸಿದ್ದೀರಿ ?

**ಶ್ರೀಶೈಲನ್** : ಚಿತ್ರರಂಗದಲ್ಲಿ ನಾವೆಷ್ಟು ಅಂತ ಏನಾದರೂ ಒಂದು ಪದ ಇತ್ತೆಂದರೆ ಸಂಖ್ಯೆಯಿಂದ ಏನೂ ಪ್ರಯೋಜನವಿಲ್ಲ. ಆದ್ದರಿಂದ ಸಂಖ್ಯೆಗೆ ನಾನು ಬೆಲೆ ಕೊಡೋಲ್ಲ. ಹೇಳ್ಬೇಕು ಅಂದರೆ 165–170 ಚಿತ್ರಗಳು ಆಗಿವೆ. ಸಂಖ್ಯೆ ಎಂಬುದು ನಂಬರಿಗೆ ವಿನಹ, ಇನ್ನೂ ಮಾಡ ಬೇಕಾದ ಸಾಧನೆ ಸಾಕಷ್ಟು ಇದೆ.

● ಪ್ರೇಕ್ಷಕರು 'ಶ್ರೀಶೈಲನ್' ಎಂದು ನಿಮ್ಮನ್ನು ಗುರುತಿಸುವ ರೀತಿ ?

**ಶ್ರೀಶೈಲನ್** : ಚಿಕ್ಕದೋ ಪುಟ್ಟದೋ ಏನೋ ಸಪೋರ್ಟಿಂಗ್ ಕ್ಯಾರೆಕ್ಟರ್ ಮಾಡಿದರೂ ಕೂಡಾ ಎಲ್ಲೋ ಒಂದು ಕಡೆ ನನ್ನತನ ಇದೆ. ನಾನು ಯಾರನ್ನೂ ಇವರ ಶೈಲಿಯಲ್ಲಿ ಮಾಡಬೇಕು, ಅವರ ಕಾಲ ಹೆಜ್ಜೆಯಲ್ಲಿ ನಡೆಯಬೇಕು ಅಂತ ಅನುಕರಿಸುವುದಿಲ್ಲ. ಯಾವುದೇ ಸಂಭಾಷಣೆ ಕೊಟ್ಟರೂ ಕೂಡಾ ಅದಕ್ಕೆ ನನ್ನದೇ ಮುದ್ರೆ ಯಿರುತ್ತದೆ. ಹೆಚ್ಚಿನವರು ನನ್ನ ಅಭಿನಯದಲ್ಲಿ 'ನೈಜತೆ' ಇದೇಂತ ಹೇಳ್ತಾರೆ.

● ನಿಮ್ಮ ಅಭಿನಯದ ಯಾವುದೇ ಚಿತ್ರದ ಕುರಿತು ಹೇಳಬಹುದೇ ?

**ಶ್ರೀಶೈಲನ್** : ನಾನು 'ಭಾಗ್ಯದ ಲಕ್ಷ್ಮಿ ಬಾರಮ್ಮಾ' ಚಿತ್ರದಲ್ಲಿ ಪುಟ್ಟ ಕಾಮಿಡಿ ಪಾತ್ರ ಮಾಡಿದ್ದೆ. ಈ ಚಿತ್ರ ತೆರೆಗೆ ಬಂದು ಬಹಳ ದಿನಗಳಾದವು. ಆ ಚಿತ್ರದ ನನ್ನ ಅಭಿನಯ ನೋಡಿದವರು ಈಗಲೂ ಬಹಳ ಮೆಚ್ಚುತ್ತಾರೆ. ಬ್ರಾಹ್ಮಣ ಸಂಕುಲಕ್ಕೆ ಬೇಕಾದಂಥ ಒಂದು ಲಕ್ಷಣ ಬೇಕು ಅಂತೆಂದರೆ ಎಲ್ಲರೂ ಹೆಚ್ಚು ಕಮ್ಮಿ ಬ್ರಾಹ್ಮ-ವರ, ಅಥವಾ ನನಗೆ ಹೇಳಿಕಳುಹಿಸುವರು. ಈ ರೀತಿಯಾಗಿ ಅಂಥ ಪಾತ್ರಗಳಿಗೆ ಪರಿಪೂರ್ಣ ಗೌರವ ಸಲ್ಲಿಸಬಲ್ಲೆವು. ಅದಕ್ಕಾಗಿ ಅಂಥ ಪಾತ್ರಗಳನ್ನು ಮಾಡಬೇಕಾದರೆ ಶ್ರೀಶೈಲನ್‌ರವರೇ ಬೇಕು ಅಂತ ಕರೆಸಿಕೊಳ್ಳುತ್ತಾರೆ. ಸಾಮಾನ್ಯವಾಗಿ ಆ ಟ್ರ್ಯಾಕ್‌ನಲ್ಲೇ ನನ್ನ ಪಾತ್ರಗಳು ಹೋಗ್ತವೆ.

● ಸರೋಜಾರವರೇ, ನೀವು ಈತನಕ ಎಷ್ಟು ಚಿತ್ರಗಳಲ್ಲಿ ಅಭಿನಯಿಸಿದ್ದೀರಿ ?

**ಸರೋಜಾ** : ನನ್ನದು ಸುಮಾರು ಹದಿನೈದು ಚಿತ್ರಗಳಾಗಿರಬಹುದು. ನಾನು ಎರಡು ವರ್ಷಗಳಿಂದೀಚೆಗೆ ಚಿತ್ರಗಳಲ್ಲಿ ಅಭಿನಯಿಸಿದ್ದೀನಿ. ದೂರದರ್ಶನದ ಧಾರಾವಾಹಿಗಳಲ್ಲೂ ಮೂರು ವರ್ಷಗಳಿಂದ ಅಭಿನಯಿಸುತ್ತಿದ್ದೀನಿ.

● ನಿಮ್ಮ ಅಭಿನಯವನ್ನು ಗುರುತಿಸುವ ಚಿತ್ರಗಳು ?

**ಸರೋಜಾ** : ಈಗ 'ಗೃಹಪ್ರವೇಶ' ಚಿತ್ರದಲ್ಲಿ ಕುಣಿಗಲ್ ನಾಗಭೂಷಣ್ ಅವರ ಜತೆ ಚಿಕ್ಕ ಕಾಮಿಡಿ ಪಾತ್ರ ಮಾಡಿದ್ದೀನಿ. ಗುರುತಿಸಬೇಕಾದಂಥ ಚಿತ್ರ ಎ.ಟಿ. ರಘು ನಿರ್ದೇಶನದ "ಪುಟ್ಟ ಹೆಂಡ್ತಿ" (ಇನ್ನೂ ಬಿಡುಗಡೆ ಆಗಿಲ್ಲ.) ಚಿತ್ರದಲ್ಲಿ ಬಹಳ ದೊಡ್ಡ ಪಾತ್ರ ಮಾಡಿದ್ದೀನಿ. ಪ್ರಭಾಕರ್ ಅವರ ತಾಯಿಯಾಗಿ ಅಭಿನಯಿಸಿದ್ದೀನಿ. ಅದೇನಾದರೂ ಬಿಡುಗಡೆಯಾದರೆ ಜನ ಗುರುತಿಸಿ, ನನಗೆ ಅಂಥ ದೊಡ್ಡ ಪಾತ್ರಗಳು ಸಿಗಬಹುದೆಂದು ಭಾವಿಸಿದ್ದೀನಿ.

● ಜತೆಗೆ ನೀವು ಗಾಯಕಿ ಅಲ್ವೆ ?

**ಸರೋಜಾ** : ಹೌದು. ನಾನು ಈಗಲೂ ಆಕಾಶವಾಣಿ, ದೂರದರ್ಶನ ಕಾರ್ಯಕ್ರಮಗಳಲ್ಲಿ ಹಾಡುತ್ತಿದ್ದೇನೆ.

● ಯಾವಾಗ ಪ್ರವೇಶವಾಯಿತು. ಹೇಗೆ ?

**ಸರೋಜಾ** : ಸುಮಾರು 15–20 ವರುಷಗಳಿಂದ ಹಾಡುತ್ತಿದ್ದೀನಿ. ಚಿಕ್ಕವಯಸ್ಸಿನಿಂದಲೂ ಸಂಗೀತ ಅಂದರೆ ನನಗೆ ತುಂಬಾ ಇಷ್ಟ- ನನ್ನ ಫ್ಯಾಮಿಲಿ ಪೂರಾ ಬರೀ ಸಂಗೀತದವರೇ- ನಮ್ಮ ತಂದೆ-ತಾಯಿ ಎಲ್ಲರೂ ಸಂಗೀತ ಕಲಾವಿದರು. ನಮ್ಮ ಸೋದರತ್ತೆ ಮಗ ಎಂ. ಎ. ನರಸಿಂಹಾಚಾರ್ ಭಾರೀ ದೊಡ್ಡ ಸಂಗೀತ ವಿದ್ವಾಂಸರು. ಈಗಲೂ ಅವರು ಕಚೇರಿಗಳನ್ನು ಕೊಡ್ತಾ ಇದ್ದಾರೆ. ಅವರ ಮಕ್ಕಳು ಹಾಡುತ್ತಾರೆ. ಆ ವಾತಾವರಣದಲ್ಲಿ ನಾನು ಬೆಳೆದುದರಿಂದ ಸಂಗೀತ ನನಗೆ ಚಿಕ್ಕ ವಯಸ್ಸಿನಿಂದ ಬಂದ್ಬಿಟ್ಟಿದೆ.

● ಸಂಗೀತ ಶಾಸ್ತ್ರೀಯವಾಗಿ ಕಲಿತಿದ್ದೀರಾ ?

**ಸರೋಜಾ**: ಶಾಸ್ತ್ರೀಯವಾಗಿ ನಾನು ಸೀನಿಯರ್ ಪರೀಕ್ಷೆ ಪಾಸು ಮಾಡಿದ್ದೀನಿ. ಅಂದರೆ ಕರ್ನಾಟಕ ಸಂಗೀತ ಕಲಿತಿದ್ದರೂ ಭಾವಗೀತೆಗಳ ಕಡೆ ನನ್ನ ಒಲವು ಬಹಳ ಜಾಸ್ತಿ. ಅದನ್ನೇ ಹಾಡ್ತಾ ಇದ್ದೀನಿ. ಪಬ್ಲಿಕ್ ಪ್ರೋಗ್ರಾಂ ಕೊಡ್ತಾ ಇದ್ದೀನಿ.



● ಸಿನಿಮಾಗಳಲ್ಲಿ ಹಾಡಿದ್ದೀರಾ ?

**ಸರೋಜಾ** : ಎರಡು-ಮೂರು ಚಿತ್ರಗಳಲ್ಲಿ ಮಾತ್ರ ಹಾಡಿದ್ದೆ. ಅದೇನೋ ಆ ಚಿತ್ರಗಳು ಈ ತನಕ ಬಿಡುಗಡೆಯಾಗಿಲ್ಲ. ಹೇಳಿಕೊಳ್ಳುವಂಥ ಅವಕಾಶಗಳು ಸಿನಿಮಾಗಳಲ್ಲಿ ನನಗೆ ಸಿಗಲೇ ಇಲ್ಲ.

● ಶ್ರೀಶೈಲನ್‌ರವರೇ, ನಿಮ್ಮ ಹಿನ್ನೆಲೆ ?







# ಭಲೇ ಜೋಡಿ ಶ್ರೀಮತಿ ಸರೋಜಾ ಮತ್ತು ಶ್ರೀಶೈಲನ್

**ಶ್ರೀಶೈಲನ್ :** ನಾನು ಬಿ. ಎಸ್. ಸಿ. ಬಿ. ಎಡ್ ಮಾಡಿದ್ದೀನಿ. ಓದು ಮುಗಿಸಿ, ಬೆಂಗಳೂರಿಗೆ ಬಂದಾಗ ನಾನು ಮೊದಲು ನ್ಯಾಷನಲ್ ಮಿಡಲ್ ಸ್ಕೂಲ್‌ನಲ್ಲಿ ಮೇಷ್ಟ್ರ ಕೆಲಸಮಾಡಿದ್ದೆ. ಅಲ್ಲಿ ಪಕ್ಕದಲ್ಲೇ ಎ. ಎಸ್. ಮೂರ್ತಿಯವರ "ಚೈತ್ರ" ನಾಟಕ ತಂಡವಿತ್ತು. ಮೊದಲು ನಾನು ಸಾರ್ವಜನಿಕವಾಗಿ ರಂಗದ ಮೇಲೆ ಬಂದಿರುವುದು ಆ ತಂಡದ ಮೂಲಕವೇ. ಆಮೇಲೆ 'ಆಲ್ ಇಂಡಿಯಾ ರೇಡಿಯೋ'ದಲ್ಲಿ ಕಲಾವಿದನಾಗಿ ಆಯ್ಕೆಯಾದೆ. ಅಲ್ಲಿ ಒಂದು ವರುಷದಲ್ಲಿ ಇಂತಿಂಥ ಪಾತ್ರಗಳಿಗೆ ಇವರೇ ಬೇಕು ಅನ್ನುವ ಮಟ್ಟಿಗೆ ಹೆಸರು ಪಡೆದುಕೊಂಡೆ. ಒಮ್ಮೆ ಗೌರಿಸುಂದರ್ ಅವರ ಪರಿಚಯವಾಯಿತು. ಅವರು ಆಗತಾನೇ 'ಸಂದರ್ಭ' ಚಿತ್ರವನ್ನು ಮುಗಿಸಿ, ಹೊಸ ಚಿತ್ರವನ್ನು ತಯಾರಿಸುವ ಸಿದ್ಧತೆಯಲ್ಲಿದ್ದರು. ಅದು ಎ. ಎಸ್. ಮೂರ್ತಿ ಅವರ ನಾಟಕ- ಅದನ್ನೇ ಸಿನಿಮಾಕ್ಕೆ ಅಳವಡಿಸಿ ಚಿತ್ರ ಮಾಡಬೇಕೆಂದು ಯೋಜನೆ ಹಾಕಿದ್ದರು. ಆ ಚಿತ್ರದಲ್ಲಿ ಒಂದು ವಿಶಿಷ್ಟ ಪಾತ್ರವಿದೆ.

ಆ ದಿನಗಳಲ್ಲಿ ಎ. ಎಸ್. ಮೂರ್ತಿಯವರ 'ಈರಣ್ಣ' ರೇಡಿಯೋದಲ್ಲಿ ಬಹಳ ಫೇಮಸ್ ಆಗಿತ್ತು. ಆ ಗ್ರಾಮ್ಯ ಶೈಲಿಯನ್ನು ನಾನು 'ಇಮಿಟೇಟ್' ಮಾಡುತ್ತಿದ್ದೆ. ಮೂರ್ತಿ ಅವರು ಕೂಡಾ ನನ್ನ ಅಭಿನಯವನ್ನು ಮೆಚ್ಚಿದ್ದರು. ಯಾವಾಗ ಗೌರಿಸುಂದರ್ ನನ್ನ ಈ ಅನುಕರಣೆ ಅಭಿನಯವನ್ನು ನೋಡಿದ್ದರೋ ಆ ಪಾತ್ರಕ್ಕೆ ನನ್ನನ್ನು ಆಯ್ಕೆ ಮಾಡಿದ್ದರು. ನಾನು ಗೌರಿಸುಂದರ್ ಅವರಿಗೆ ಹೇಳಿದ್ದೆ– 'ಚಿತ್ರರಂಗಕ್ಕೆ ಬರಬೇಕಾದರೆ ಅದಕ್ಕೇಂತ ಒಂದು ಸುಂದರ ರೂಪ, ಆಕಾರ ಅದೇನೂ ಇರುತ್ತೆ. ನಾವೆಲ್ಲ ನಾಟಕಕ್ಕೆ ಮಾತ್ರ ಸರಿ. ಸಿನಿಮಾಕ್ಕೆ ಬರಬೇಕಾದರೆ ನನಗೆ ಅಂಜಿಕೆಯಾಗುತ್ತೆ !' ಎಂದಾಗ ಅವರು,

"ನಿಮಗೆ ಯಾಕೆ ಆ ತಲೆನೋವು ? ಸಮಾಜದಲ್ಲಿ ನೀವ್ಹೊಬ್ಬರು ಅಣ್ಣ, ಅಪ್ಪ ಏನೋ ಒಂದು ಆಗಿದ್ದೀರಿ. ಅದೇ ರೀತಿ ನಾವು ಸಮಾಜವನ್ನು ತೋರಿಸುವವರು. ನಿಮಗೆ ಹೆದರಿಕೆ ಯಾಕೆ ? ನೀವು ಬಂದು ಮಾಡಿ" ಅಂದರು.

'ಸ್ಟೇಜ್‌ನವರಿಗೆ ಹೆದರಿಕೆ ಯಾವುದು ಇಲ್ಲವೇ ಇಲ್ಲ. ಧೈರ್ಯವೂ ನಮಗೆ ಇರುತ್ತೆ. ಚಿತ್ರರಂಗಕ್ಕೆ ನಾನು ಹೊಂದಿಕೊಳ್ಳುತ್ತೇನೊ ಅನ್ನುವ ಸಂಶಯ ಅಷ್ಟೇ !'–

'ಸರಿ. ನನ್ನ ಮೊದಲನೆ ಚಿತ್ರ 'ಇಂದಿರಾಯಣ' ಅಂತ. ರಾಧಾಕೃಷ್ಣ ಮತ್ತು ಜಯಲಕ್ಷ್ಮಿ ಅವರ ಅಭಿನಯದ ಚಿತ್ರ. ಇದಕ್ಕೆ ಸುಕುಮಾರ್ ಸಂಗೀತ ನೀಡಿದ್ದಾರೆ. ನಿರ್ದೇಶನ ಗೌರಿಸುಂದರ್.

● ಸರೋಜಾ ಅವರೇ ನಿಮ್ಮಿಬ್ಬರ ಪ್ರಥಮ ಭೇಟಿ... ?

**ಸರೋಜಾ :** 'ಮಂಡ್ಯಮ್ ಅಯ್ಯಂಗಾರ್ಸ್' ಅಂತ ನಮ್ಮಲ್ಲಿ ಒಂದು ಅಸೋಸಿಯೇಷನ್ ಇದೆ. ಆ ಸಂಘದವರು ಪ್ರತಿವರ್ಷ ಒಂದು ದಿನ ಸಮಾಜ ಬಾಂಧವರನ್ನು ಒಟ್ಟುಗೂಡಿಸುತ್ತಾರೆ. ಆದಿನ ನಾಟಕ, ಸಂತೋಷ ಕಾರ್ಯಕ್ರಮಗಳನ್ನು ನಡೆಸುತ್ತಾರೆ. ನಾನು ಚಿಕ್ಕ ವಯಸ್ಸಿನಿಂದಲೂ ನಾಟಕಗಳಲ್ಲಿ ಅಭಿನಯಿಸುತ್ತಿದ್ದೆ. ನಮ್ಮ ಅಸೋಸಿಯೇಷನ್‌ನಲ್ಲಿ ಮಾತ್ರ ಮಾಡುತ್ತಾ ಇದ್ದೆ. ನಮ್ಮ ತಂದೆ ಬಹಳ ಸ್ಟ್ರಿಕ್ಟ್. ಹೊರಗಡೆ ಕಳುಹಿಸುತ್ತಾ ಇರಲಿಲ್ಲ. ಎಸ್. ಎಸ್. ಎಲ್. ಸಿ. ಆದಮೇಲೆ ನನ್ನನ್ನು ಕಾಲೇಜ್‌ಗೂ ಸೇರಿಸಲಿಲ್ಲ. ಹೆಣ್ಣು ಹುಡುಗಿಯರು ಹೆಚ್ಚು ಓದುವುದು ಬೇಡಾಂತ ಅವರ ಅಭಿಪ್ರಾಯ. ಶ್ರೀಶೈಲನ್ ಅವರು ಬೇರೆ ಊರಿನಿಂದ ಇಲ್ಲಿಗೆ ಟ್ರಾನ್ಸ್‌ಫರ್ ಆಗಿ ಬಂದರು. ನಮ್ಮ ಅಸೋಸಿಯೇಷನ್‌ನ ನಾಟಕಗಳಲ್ಲಿ ನಾವಿಬ್ಬರೂ ಅಭಿನಯಿಸಬೇಕಾಗಿತ್ತು. 'ಶ್ರೀನಿವಾಸ ಕಲ್ಯಾಣ' (ಪದ್ಮಾವತಿ ಪರಿಣಯ) ಅಂತ ಪರ್ವತವಾಣಿಯವರು ಬರೆದ ನಾಟಕ. ಆ ನಾಟಕದಲ್ಲಿ ನಾನು ಹುಡುಗನ ತಂಗಿಯಾಗಿ ಬರುತ್ತೇನೆ. ಶ್ರೀಶೈಲನ್ ಹುಡುಗನ ತಂದೆಯಾಗಿ ಬರುತ್ತಾರೆ.

'ಲವ್ ಗೀವ್' ಏನಿಲ್ಲ. ನಮ್ಮ ಸಂಬಂಧದವರು ಯಾರೋ ಒಬ್ಬರು ನೋಡಿ 'ಈ ಹುಡುಗಿ, ಹುಡುಗ ಇಬ್ಬರೂ ಇದ್ದಾರೆ. ಇಬ್ಬರೂ 'ಡ್ರಾಮಾ' ಅಂತ ಓಡಾಡುತ್ತಿದ್ದಾರೆ. ಇವರಿಬ್ಬರಿಗೆ ಯಾಕೆ ಮದುವೆ ಮಾಡಿಸಬಾರದು' ಎಂದು ಸೂಚನೆ ನೀಡಿದರು. ಆಮೇಲೆ ಜಾತಕ ಕೊಟ್ರು. ಜಾತಕ ಸರಿಹೋಯಿತು. ಇದು ನಮ್ಮಿಬ್ಬರ ಮದುವೆ ನಡೆದ ಕತೆ.

**ಶ್ರೀಶೈಲನ್ :** ಇಬ್ಬರ ಮನಸ್ಸು ಒಮ್ಮನಸ್ಸು ಇದ್ದುದರಿಂದ ನಮ್ಮ ಸಂಸಾರ ಅಚ್ಚುಕಟ್ಟಾಗಿ ನಡೆದುಹೋಗುತ್ತಿದೆ.

**ಸರೋಜಾ :** ಕಲಾವಿದರೇ ಆದರೂ ಕೂಡಾ

# ಭಲೇ ಜೋಡಿ!

ಎಲ್ಲ ಗಂಡಂದಿರು ತಮ್ಮ ಹೆಂಡತಿಯನ್ನು ಈ ರೀತಿ ಹೊರಗಡೆ ನಾಟಕ, ದೂರದರ್ಶನ, ಸಿನಿಮಾಗಳಲ್ಲಿ ಮಾಡಿಸುತ್ತಾರೆ ಅನ್ನುವುದು ಬರೀ ಸುಳ್ಳು. ಅವರ ಮನಸ್ಸು ಒಂದೇ ಆಗಿದ್ದು ಅಂಡರ್-ಸ್ಟಾಂಡಿಂಗ್ ಚೆನ್ನಾಗಿರಬೇಕು. ನಾನು ನಮ್ಮ ಅಸೋಸಿಯೇಷನ್‌ನಲ್ಲಿ ನಾಟಕಗಳಲ್ಲಿ ಮಾಡುತ್ತಿರುವಾಗ, ದೂರದರ್ಶನದಲ್ಲಿ ಕಲಾವಿದರು ಬೇಕು ಎಂದು 'ಕಾಲ್‌ಫಾರ್' ಮಾಡಿದ್ದರು. ಆಗ ಶ್ರೀಶೈಲನ್ ಅವರು ಅಲ್ಲಿಗೆ ಅಪ್ಲಿಕೇಶನ್ ಹಾಕು ಅಂದರು. ಸರಿ. ಪರ್ಮಿಷನ್ ಕೊಟ್ಟ ಮೇಲೆ ಹಾಡಿದ್ದೆ. ಸೆಲೆಕ್ಟ್ ಆಯಿತು. ಕೆಲವು ನಾಟಕಗಳಲ್ಲಿ ಮಾಡಿಸಿದ್ದರು. ನನ್ನ ಅಭಿನಯದ ನಾಟಕ ನೋಡಿ ರವಿಕಿರಣ್ ಅವರು "ನಗು ನಗುತಾನಲಿ" ಧಾರಾವಾಹಿಯಲ್ಲಿ ನನಗೆ ಒಂದು ಉತ್ತಮ ಪಾತ್ರಕೊಟ್ಟರು. ಈ ಧಾರಾವಾಹಿಯಿಂದ ನಾನು ಜನಪ್ರಿಯಳಾದ ನಂತರ 'ಕನ್ನಡಿಯೊಳಗಿನ ಗಂಟು', 'ಒಂದು ಘಟನೆಯ ಸುತ್ತ', 'ಮೈಲುಗಲ್ಲುಗಳು' ಇದರಲ್ಲಿ ಒಳ್ಳೆ ಪಾತ್ರ. ಜನ ಗುರುತಿಸುವಂತೆ ಆಯಿತು. ಈಗ ನಾನು ಚಿಕ್ಕಪಾತ್ರ ಮಾಡಿದರೂ ಜನ ಬೇಗ ಗುರುತಿಸುತ್ತಾರೆ.

● ನಿಮ್ಮಿಬ್ಬರ ಹೊಂದಾಣಿಕೆ... ?

**ಶ್ರೀಶೈಲನ್** : ಇದರಲ್ಲೇನು. ನಮಗೆ ಒಬ್ಬರಿಗೊಬ್ಬರಿಗೆ ಹೊಂದಾಣಿಕೆ ಚೆನ್ನಾಗಿದೆ. ನನಗೆ ಏನೂ ಕೆಲಸ ಇಲ್ಲದಿದ್ದರೂ ಅವಳಿಗೆ ಎರಡು ತಿಂಗಳು ಕೆಲಸ ಇದ್ದರೂ ನಂಗೇನೂ ಹೊಟ್ಟೆಯುರಿ ಇಲ್ಲ. ಇದೇ ರೀತಿ ಅವಳಲ್ಲೂ ಇಲ್ಲ.

**ಸರೋಜಾ** : ನನ್ನ ವಯಸ್ಸಿಗೆ ಯಾವ ಥರ ಪಾತ್ರ ಕೊಟ್ಟರೂ ಮಾಡ್ತೀನಿ. ಗೌರವವಾದ ಪಾತ್ರಗಳನ್ನು ಮಾಡ್ತೀನಿ.

● ನಿಮಗೆ ಸಿಗುವ ಪಾತ್ರಗಳ ಬಗ್ಗೆ ಹೇಳುವಿರಾ ?

**ಸರೋಜಾ** : ನನಗೂ ಅನ್ನಿಸುತ್ತೆ - ಇಷ್ಟು ವರುಷಗಳಿಂದ ಶ್ರೀಶೈಲನ್ ಅವರು, ಚಿತ್ರಗಳಿಗೆ ಅಭಿನಯ ಮಾಡುತ್ತಾ ಇದ್ದಾರೆ. ಯಾಕೆ ನಿರ್ಮಾಪಕರು ಆಗಲಿ, ನಿರ್ದೇಶಕರಾಗಲಿ ಅವರ ಪ್ರತಿಭೆಯನ್ನು ಗುರುತಿಸಿ, ಒಂದು ಸಲ ದೊಡ್ಡ ಪಾತ್ರ ಕೊಟ್ಟು ಮಾಡಿಸಬಾರದು ?

● ಯಾವ ರೀತಿಯ ಪಾತ್ರ ?

**ಸರೋಜಾ** : ಯಾವ ರೀತಿಯ ಅಂದರೆ. ಅಶ್ವಥ್, ಬ್ರಹ್ಮಾವರ ಅವರಿಗೆ ಸರಿಸಮಾನ ಅಂತ ನಾನು ಹೇಳುವುದಿಲ್ಲ. ಆ ನಂತರದ ಪಾತ್ರಗಳು ಇರುತ್ತಲ್ಲ? ಸ್ವಲ್ಪ ಕಣ್ಣಿಗೆ ಬೀಳುವ ರೀತಿಯ ಪಾತ್ರಗಳನ್ನು ನೀಡಬಹುದು- ಅದರಲ್ಲೂ ಪ್ರತಿಭೆ ಇದೇಂತ ಗುರುತಿಸ ಬಹುದಲ್ಲ ? ನನಗೂ ಆಷ್ಟೇ-ಪಂಢರಿಬಾಯಿ, ಲೀಲಾವತಿ ಅವರ ಕಾಲ ಮುಗಿದ ಹೋಯಿತೆಂದು ಜನ ಹೇಳ್ತಾರೆ. ಈಗ ಮೈನಾವತಿ ಅವರೆಲ್ಲ ಇದ್ದಾರೆ. ನನಗೂ ಒಂದು ಅವಕಾಶ ಕೊಟ್ಟು ನೋಡಿದರೆ ನಾವೂ ಮಾಡ್ತೀವಿ ಎಂದು ತೋರಿಸಬಹುದು...

● ಈಗ ನಿಮ್ಮಿಬ್ಬರ ಕೈಯಲ್ಲಿ ಎಷ್ಟು ಚಿತ್ರಗಳಿವೆ ?

**ಸರೋಜಾ** : ಮಹಾಲಕ್ಷ್ಮಿ, ಪುಟ್ಟ ಹೆಂಡ್ತಿ, ಹೆಂಡ್ತಿಯರೇ ಹುಷಾರ್, ಏದಾಯ.

**ಶ್ರೀಶೈಲನ್** : ಅಗ್ನಿಪಂಜರ, ಗೂಂಡಾರಾಜ್ಯ, ಹಳ್ಳಿ ಮೇಷ್ಟ್ರು, ಪೋಲೀಸ್ ಫೈಲ್.

● ನಿಮ್ಮಿಬ್ಬರ ಮುಂದಿನ ಯೋಜನೆಗಳು ?

**ಶ್ರೀಶೈಲನ್** : ಹಾಗೇ ಚಿತ್ರರಂಗಕ್ಕೆ ಸಂಬಂಧ ಪಟ್ಟ ಯೋಜನೆಗಳು ಇಲ್ಲ. ಯಾರು ನಮ್ಮನ್ನು ಸ್ನೇಹದಲ್ಲಿ ಸರಿಯಾಗಿ ಬಳಸುತ್ತಾರೋ-ನಾವು ಕಷ್ಟ ಪಟ್ಟು ಪಾತ್ರಗಳಿಗೆ ಸರಿಯಾದ ನ್ಯಾಯ ಒದಗಿಸುತ್ತೇವೆ. ಸರಿಯಾಗಿ ದೇವರು ಕಣ್ಣು ಬಿಟ್ಟರೆ ದೂರದರ್ಶನದ ಧಾರಾವಾಹಿ ಮಾಡಬೇಕೆಂದು ಇದ್ದೇನೆ. ಹಾಗೇ ಜೀವನದಲ್ಲಿ ಹೀಗೆ ಆಗಬೇಕೆಂದು ಎಂದೂ ಯಾವುದನ್ನು ನಿರ್ಧಾರ ಮಾಡಿಲ್ಲ. ಬಂದದನ್ನು ಹಾಗೇ ಸ್ವೀಕಾರ ಮಾಡಿದರೆ ಜೀವನವನ್ನು ನಾವು ಸಂತೋಷದಲ್ಲಿ ಕಳೆಯಬಹುದು. ಇದು ನನ್ನ ಸಿದ್ಧಾಂತ.

**ಸರೋಜಾ** : ಆಸೆಪಟ್ಟು ನಿರಾಶೆ ಪಡೆಯುವುದಕ್ಕಿಂತ ಇದ್ದುದರಲ್ಲಿ ತೃಪ್ತಿ ಪಡೆಯುವುದು ಉತ್ತಮವಲ್ಲವೇ ? ●



ಮಕ್ಕಳು ಶ್ರೀವಾಣಿ, ಶ್ರೀಕಾಂತ್, ಜೊತೆ ಶ್ರೀಶೈಲನ್ ದಂಪತಿಗಳು

(17ನೇ ಪುಟದಿಂದ)

ಜೋಡಿಸುತ್ತಿದ್ದ ನರ್ಸ್ ಬಳಿ ಬಂದು ನೈಟ್ ಡ್ಯೂಟಿ ರಿಪೋರ್ಟ್‌ನ ಪುಸ್ತಕ ಬಿಡಿಸಿದಳು.

"ಹೊಸ ವಾರ್ಡಿಗೆ ಬರೋ ನಮ್ಗೆ ಚಾರ್ಜ್ ಕೊಡದೆ ಹೇಗೆ ಹೋಗ್ತಾರೆ? ಇನ್ನೂ ಏಳೂವರೆ ಘಂಟೆ...ಆಗಲೇ ವಾರ್ಡ್ ಬಿಟ್ಟು ಬಿಟ್ಟಿದ್ದಾರೆ... ನೈಟ್ ಮಾಡಿದೋರು ಯಾರಂತೆ?"—ನೋಟ್ಸನ್ನು ನೋಡುತ್ತಾ ಅಸಹನೆಯಿಂದ ಕೇಳಿದಳು.

"ಸುಶೀಲಮ್ಮ ಸಿಸ್ಟರ್...ಅವರು ದೊಡ್ಡವರು ...ನಾನು ಹೇಗೆ ಹೇಳೋದು?..."—ಮುಖ ಚಿಕ್ಕದು ಮಾಡಿ ಹೇಳಿದ ಅವಳತ್ತ ನೋಡಿದ ಸಾಧನಾ,

"ಇವರೊಬ್ಬರೇ...ಈ ಆಸ್ಪತ್ರೆಯಲ್ಲಿ ನಿರ್ಲಕ್ಷ್ಯವಾಗಿ ಕೆಲಸ ಮಾಡೋದು...ಈಗಿನಿಂದಲ್ಲ... ನಾನು ಓದುತ್ತಿರುವಾಗಿನಿಂದಲೂ...ನೋಡಿದ್ದೇನೆ ...ಬೇರು ಬಿಟ್ಟಿರುವ ಇಂತಹವರನ್ನು ಕೀಳೋದು ಸುಲಭ ಸಾಧ್ಯವಲ್ಲ...ಥತ್! ಹಾಳಾಗಿ ಹೋಗಲಿ. ಬೆಳಿಗ್ಗೆನೇ ಯಾಕೆ ಮನಸ್ಸು ಕೆಡಿಸಿಕೊಳ್ಳಬೇಕು..."—ಎಂದ ಸಾಧನಾ ಪುಸ್ತಕವನ್ನು ಮೇಜಿನ ಮೇಲಿಡುತ್ತಾ,

"ದಸ್ತಗೀರ್ ಅನ್ನೋ ಪೇಶಂಟ್ ಯಾರು? ಓ. ಟಿ. ಗೆ ರೆಡಿ ಮಾಡ್ಬೇಕು..."—ಎಂದು ಕೇಳಿದಳು.

"ಬಲಗಡೆಯಿಂದ ಹತ್ತನೆಯ ಬೆಡ್‌ನಲ್ಲಿದ್ದಾನೆ ..."—ಎಂದು ತನ್ನ ಕೆಲಸದಲ್ಲಿ ಮಗ್ನಳಾದಳು...

ಸಾಧನಾ ಅತ್ತ ಹೆಜ್ಜೆ ಹಾಕಿದಳು. ಅವಳ ಹೆಜ್ಜೆಯ ಸಪ್ಪಳ ಕೇಳಿದ ರೋಗಿ ಮೆಲ್ಲನೆ ಕಣ್ತೆರೆದ. ಎಲುಬಿನ ಗೂಡಿನಂತಿದ್ದ ಆ ದೇಹದಲ್ಲಿ ಇನ್ನೂ ಜೀವವಿದೆಯೆ? ಎಂಬ ಸಂದೇಹದಿಂದ ಇನ್ನೂ ಹತ್ತಿರ ಹೋದಳು...ಅವನ ಶೂನ್ಯ ತುಂಬಿದ ಕಣ್ಣುಗಳು ನಿಧಾನವಾಗಿ ಚಲಿಸಿದವು.

"ದಸ್ತಗೀರ್..."—ಎಂದು ಮೃದುವಾಗಿ ಕರೆದಳು.

'ಏನು' ಎನ್ನುವಂತೆ ಅವಳತ್ತ ಕಣ್ಣು ಹೊರಳಿಸಿದ.

"ನಾಳೆ...ನಿನಗೆ ಆಪರೇಷನ್ ಮಾಡೋದು ಗೊತ್ತು, ತಾನೆ?"

"ಹೂಂ..."—ಎಂದ ಅವನ ಸ್ವರ ಆಳವಾದ ಬಾವಿಯಿಂದ ಬಂದಂತಿತ್ತು.

"ಆಸ್ಪತ್ರೆಗೆ ಸೇರಿ ಎಷ್ಟು ದಿನಗಳಾದುವು? ರಕ್ತ ಪರೀಕ್ಷೆ, ಎಕ್ಸ್‌ರೇ...ಎಲ್ಲಾ ಪರೀಕ್ಷೆಗಳು ಮುಗಿದಿವೆ ತಾನೆ?..."—ಎಂದು ಕೇಳುತ್ತಾ ಕೇಸ್ ಷೀಟ್ ಬಿಡಿಸಿ ನೋಡುತ್ತಾ ಕೇಳಿದಳು.

"ಆಸ್ಪತ್ರೆಗೆ ಬಂದು ತಿಂಗಳಾಯ್ತು... ಏನೇನೋ ಮಾಡ್ತಾನೇ ಇರ್ತಾರೆ...ಹಂಗೇನೇ ಇದ್ದೀನಿ..."—ಎಂದ ಒಣಗಿದ ಸ್ವರದಲ್ಲಿ.

"ಬಾಯಿಲಿ ಶುರುವಾಗಿ ವರ್ಷಗಳೇ ಆಗಿರುವಾಗ ವಾಸಿಯಾಗಲು ತಿಂಗಳಾದ್ರೂ ಬೇಡವೇನು?"—ಎನ್ನುತ್ತಾ ಕೇಸ್ ಷೀಟನ್ನು ಕೈಯಲ್ಲಿ ಹಿಡಿದು ಹೇಳಿದಳು.

"ಆಪ್ರೇಸನ್ ಆದ್ರೆ ಈ ಬೀಮಾರಿ... ಹೋಗುತ್ತೆ ಅಲ್ವಾ ಸಿಸ್ಟರ್...?"—ಎಂದು ಕಾತುರದಿಂದ ಕೇಳಿದ ಅವನ ಶಬ್ದಗಳಲ್ಲಿ ಕ್ಷಣಕಾಲ ಮಿಂಚಿ ಮರೆಯಾದ ಆಸೆಯ ಬೆಳಕನ್ನು ಕಂಡು ಅವಳ ಹೃದಯ ಮೃದುವಾಗಿ ಕಂಪಿಸಿತು.

ಇದು ವಾಸಿಯಾಗದ ಮಟ್ಟಕ್ಕೆ ಮುಟ್ಟಿರುವ ಕ್ಯಾನ್ಸರ್ ಎಂದು ಅವನಿಗೆ ಹೇಗೆ ಹೇಳುವುದು? ಆದರೂ ಎಲ್ಲರೂ ಯತ್ನ ಮೀರಿ ಪ್ರಯತ್ನಿಸುತ್ತಿಲ್ಲವೆ?

ಆದರೂ......

ಉಕ್ಕಿ ಬಂದ ಭಾವನೆಗಳನ್ನು ತಡೆದು,

"ಹೌದು...ಆದರೆ ನೀನು ಧೈರ್ಯವಾಗಿರ್ಬೇಕು...ಎಲ್ಲಿ ನಿನ್ನ ಕಡೆಯವರ್‍ಯಾರೂ ಬಂದಿಲ್ಲವೇನು?..."—ಕೇಳಿದಳು.

"ಬಂದವ್ರೆ...ನನ್ನ ಬೀವಿ ಒಬ್ಳೇ ಇರೋದು... ಈ ನರ್ಸಮ್ಮ ಹೊರಗ್ ಕಳ್ಸಿದ್ರು...ಅಲ್ಲೇ ಎಲ್ಲೋ ನಿಂತಿರ್ಬೇಕು..."—ಎಂದ ಅವನು ಸ್ವಲ್ಪ ಚೇತರಿಸಿಕೊಂಡಂತೆ ಭಾಸವಾಯಿತು. ಅಲ್ಲಿಯೇ ನಿಂತು ಡ್ರಿಪ್ ಸ್ಟ್ಯಾಂಡನ್ನು ಸರಿಪಡಿಸುತ್ತಿದ್ದ ವಾರ್ಡ್ ಬಾಯನ್ನು ಕರೆದ ಸಾಧನಾ,

"ಇವರ ಕಡೆಯವರನ್ನು ಒಳಗೆ ಕರಿ..."—ಎಂದಳು.

"ಇದೇನ್ ಸಿಸ್ಟರ್...ಹೊಸದಾಗಿ ಹೇಳ್ತಾಯಿದ್ದೀರಾ? ಇದು ಜನರಲ್ ವಾರ್ಡು...ಈ ಹೊತ್ತಿನಲ್ಲಿ ಅಟೆಂಡೆಂಟ್ಸ್‌ಗಳು ಬಂದ್ರೆ 'ಬಾಸ್'. ನನ್ನನ್ನು ಸುಮ್ನೆ ಬಿಡ್ತಾರಾ?"—ಒಂದೇ ಉಸಿರಿನಲ್ಲಿ ಹೇಳುತ್ತಿದ್ದ ಅವನನ್ನು ತಡೆದು,

"ಹೇಳಿದಷ್ಟು ಮಾಡು...ನನ್ನ ಕೆಲಸದ ಇತಿಮಿತಿಗಳು ನಂಗೆ ಗೊತ್ತಿವೆ..."—ಎಂದಳು ಕಟುವಾಗಿ.

"ಆದರೇ..."—ಎಂದು ರಾಗವೆಳೆಯ ತೊಡಗಿದ ಅವನನ್ನು ಕಂಡು ಸಾಧನಾಳ ಮೈ ಉರಿದು ಹೋಯಿತು.

"ರೌಂಡ್‌ಗೆ ಬಂದಾಗ ಅಟೆಂಡ್ ಮಾಡೋಳು ನಾನು ತಾನೆ? ಈಗ ಹೇಳಿದಷ್ಟು ಮಾಡು..."—ಎಂದ ಅವಳ ಗಡಸು ಧ್ವನಿಗೆ ಅಂಜಿ ಮೆಲ್ಲನೆ ಗೊಣಗುತ್ತಾ ಅಲ್ಲಿಂದ ಮರೆಯಾದ. ನಾಳಿನ ಆಪರೇಷನ್ನಿನ ಸಲುವಾಗಿ ಮಾಡಬೇಕಾಗಿದ್ದ ಇನ್‌ಸ್ಟ್ರಕ್ಷನ್ಸ್‌ಗಳನ್ನು ಓದುತ್ತಿದ್ದಂತೆಯೇ ಮೃದುವಾದ ಹೆಜ್ಜೆಯ ಸಪ್ಪಳ ಕೇಳಿ ತಲೆ ಎತ್ತಿ ನೋಡಿದಳು. ಕಪ್ಪು ಬಟ್ಟೆಯ ಬುರಖಾ ಧರಿಸಿದ ಹೆಂಗಸು ಮಂಚದತ್ತ ನಡೆದು ಬರುತ್ತಿದ್ದಳು.

(ಸಶೇಷ)

## ಅರಳೆಯಲ್ಲಿ ಹೂಗಳನ್ನು ಅರಳಿಸುವ ಕಲಾವಿದೆ ಶ್ರೀಮತಿ ಲಲಿತಮ್ಮ ಅನಂತಕೃಷ್ಣ



ಹತ್ತಿಯು ಹಿಂದೂ ಮಹಿಳೆಯರಿಗೆಲ್ಲಾ ಪೂಜೆಗೆ ಅಗತ್ಯವಾದ ವಸ್ತು. ಇದರಿಂದ ಮಾಡಿದ ಗೆಜ್ಜೆ ವಸ್ತ್ರ, ಹೂ ಬತ್ತಿ, ಮಂಗಳಾರತಿ ಬತ್ತಿ ಇಲ್ಲದೆ ಯಾವ ಪೂಜಾಕಾರ್ಯವೂ ನಡೆಯುವುದೂ ಇಲ್ಲ. ಇವುಗಳನ್ನು ತಯಾರಿಸುವುದೂ ಒಂದು ಕಲೆ. ಈ ಕಲೆಯನ್ನು ಮೈಗೂಡಿಸಿಕೊಂಡಿರುವ ಭದ್ರಾವತಿಯ ಶ್ರೀಮತಿ ಲಲಿತಮ್ಮ ಅನಂತಕೃಷ್ಣರವರು ಹತ್ತಿಯಲ್ಲಿ ಗುಲಾಬಿಹೂವು, ಪದ್ಮ, ಮೊಗ್ಗು, ಜೇನುಗೂಡು, ದಾಸವಾಳ, ಮಾವಿನಕಾಯಿಯ ಪದಕದ ಹಾರ, ಗುಂಡಿನ ಸರ, ಒಂದೇ ಎರಡೇ ನೂರಾರು ರೀತಿಯ ಹತ್ತಿಯ ಹಾರಗಳನ್ನು ತಯಾರಿಸಿ ದೇವರಿಗೆ ಅರ್ಪಿಸಿದ್ದಾರೆ. ಗೆಳತಿಯರಿಗೂ ಹೇಳಿಕೊಟ್ಟಿದ್ದಾರೆ. ಗೌರಿ ಹಬ್ಬದ ವೇಳೆಯಲ್ಲಿ ಈಕೆಗೆ ಬಿಡುವಿಲ್ಲದ ಕೆಲಸ, ಮಂಟಪವನ್ನೂ ಹತ್ತಿಯ ಹೂಗಳಿಂದ ಅಲಂಕರಿಸುತ್ತಾರೆ. ಗೌರಿಗೆ ಹತ್ತಿಯಿಂದಲೇ ತಯಾರಿಸಿದ ದುಂಡುಮಲ್ಲಿಗೆ ಮೊಗ್ಗಿನ ಜಡೆಯನ್ನೂ ಹಾಕುತ್ತಾರೆ. ಪೂಜೆಗೆ ಪೂರಕವಾಗುವಂತಹ ಹಾಡುಗಳು, ಭಜನೆ ಇವುಗಳನ್ನೂ ರಚಿಸಿದ್ದಾರೆ. ಹಾಡೊಂದನ್ನು ಆರಂಭಿಸಿ ಹತ್ತಿಯ ಎಳೆಯನ್ನು ಹಾರಕ್ಕಾಗಿ ಕೈಗೆತ್ತಿಕೊಳ್ಳುತ್ತಾರೆ. ಹಾಡೂ, ಹಾರ ಏಕಕಾಲದಲ್ಲಿ ಮುಗಿದಿರುತ್ತದೆ.

ಜೊತೆಗೆ ಅವರು ಮಕ್ಕಳಿಗೆ ಮನೆಮದ್ದು. ಪಥ್ಯದ ಅಡಿಗೆ, ಇವುಗಳ ಬಗೆಯೂ ಬಲ್ಲರು. ಇವರ ಸಲಹೆಗಾಗಿ ಅನೇಕ ಹೆಂಗೆಳೆಯರು ಇವರನ್ನು ಸುತ್ತುವರಿದಿರುತ್ತಾರೆ. ಸುಲಭದ ಅಡಿಗೆಯೂ ಸರಳ ಸೂತ್ರಗಳನ್ನೂ ಇವರು ರಚಿಸಿದ್ದಾರೆ. ಮನೆಸಂಸಾರದ ನಿರ್ವಹಣೆಯ ಉಳಿತಾಯ ಕ್ರಮವನ್ನೂ ಕಿವಿ ಮಾತಿನಲ್ಲಿ ಹೇಳುತ್ತಾರೆ. ಅಂತೂ ಗೃಹಿಣಿ ಹಾಸಿಗೆ ಇದ್ದಷ್ಟು ಕಾಲು ಚಾಚು ಎನ್ನುವ ಗಾದೆಗೆ ಅನುವಾಗಿದ್ದರೆ ಸಾಕು ಎನ್ನುತ್ತಾರೆ. ಪತಿ, ಗಂಡು, ಹೆಣ್ಣು ಮಕ್ಕಳು, ಸೊಸೆ, ಮೊಮ್ಮಕ್ಕಳು ಇರುವ ಲಲಿತಮ್ಮನವರು ಸದಾ ತಮ್ಮನ್ನು ಯಾವುದಾದರೊಂದು ಕೈ ಕೆಲಸದಲ್ಲಿ ತೊಡಗಿಸಿಕೊಂಡಿರುತ್ತಾರೆ. ನಗರಗಳಲ್ಲಿ ಇರುವ ಸೌಲಭ್ಯಗಳು ಗ್ರಾಮೀಣ ಸೌಲಭ್ಯಗಳಿಗಿಂತ ಹೆಚ್ಚಾಗಿರುತ್ತವೆ. ಕಲೆ ಅಲ್ಲಿ ಪ್ರಚಾರವಾಗುವ ಸಾಧ್ಯತೆ ಹೆಚ್ಚು ಎನ್ನುತ್ತಾರೆ. ಹತ್ತಿಯ ಕಲೆಯ ಬಗ್ಗೆ ಒಂದು ಪುಸ್ತಕವನ್ನೂ ಹೊರತರುವ ಉದ್ದೇಶವಿದೆ.

—ಶಾರದಾ ಶಾಮಣ್ಣ

ಪ್ರವಾಸ ಲೇಖನ:

ಹೊನ್ನಾವರದ ಕಡಲತಡಿಯಲ್ಲಿ ಸುಂದರ ಸೂರ್ಯಾಸ್ತ

ಶರಾವತಿಯಲ್ಲಿ ಮೀನು ಹಿಡಿಯುವ ಮಕ್ಕ



# ಹೊನ್ನಾವರಕ್ಕೆ ಹೊರಟು ಬನ್ನಿ

—ಚಿತ್ರಾಮುಟ್ಟ ಕಟಪಾಡಿ

ರುದ್ರರಮಣೀಯ ಶರಾವತಿ ಕೊಳ್ಳ





ಹೊನ್ನಾವರದ ಬಂದರು



ರಾಮತೀರ್ಥ

ಚಿತ್ರಗಳು : ಅಶ್ವಿನಿ ಜಗದೀಶ್, ಗಂಗಾಧರಮುಟ್ಟಿ





ಸರಕು ಸಾಗಿಸುತ್ತಿರುವ ಮಚ್ವೆ (ಸಣ್ಣ ಪಡಗು) ಗಳು

ಹೊನ್ನಾವರವನ್ನು 'ಕರ್ನಾಟಕದ ಕಾಶ್ಮೀರ' ಎಂದು ಬಣ್ಣಿಸಿದರೆ ತಪ್ಪಾಗದು. ಹೊನ್ನಾವರ-ಹೊನ್ನಿನ ಆವರ. ನಿಜಕ್ಕೂ ಇದು ಬಂಗಾರದ ಕವಚ ಹೊಂದಿರದಿದ್ದರೂ ಹಸಿರುತುಂಬಿದ ಕಾಡು, ಗುಡ್ಡ, ತುಂಬಿಹರಿವ ಶರಾವತಿ, ಭೋರ್ಗರೆವ ಕಡಲು ಊರಿಗೆ ಹೊನ್ನನ್ನು ತಂದುಕೊಡುತ್ತದೆ. ಹಸಿರು ಸೆರಗನ್ನು ಹೊದ್ದುನಿಂತ ಗುಡ್ಡ ಬೆಟ್ಟಗಳ ನಡುವೆ ಜುಳುಜುಳು ನಿನಾದದೊಂದಿಗೆ ಹರಿವ ಮಿನಿ ಜಲಪಾತಗಳು ಕಣ್ಮನಗಳಿಗೆ ಹಬ್ಬವನ್ನುಂಟು ಮಾಡುತ್ತವೆ. ಪಶ್ಚಿಮದಲ್ಲಿ ಅರಬ್ಬೀ ಸಮುದ್ರ ಸಹ್ಯಾದ್ರಿ ಪರ್ವತದ ಕಾಲನ್ನು ತೊಳೆಯುತ್ತಾ ಇದ್ದರೆ, ಪೂರ್ವದಲ್ಲಿ ಗುಡ್ಡ ಬೆಟ್ಟಗಳ ನಡುವೆ ಶರಾವತಿ ನದಿ ಬಳುಕಿ ಸಾಗರ ಸೇರುವ ಪರಿ ನೋಡುವುದೇ ಚೆಂದ. ಶರಾವತಿ ಮತ್ಸ್ಯೋದ್ಯಮಕ್ಕೆ ಹೇಗೆ ಉತ್ತಮವಾಗಿದ್ದಾಳೋ ಅಂತೆಯೇ ವ್ಯವಸಾಯಕ್ಕೂ ಮಹತ್ತರ ಪಾತ್ರ ವಹಿಸಿದ್ದಾಳೆ. ಶರಾವತಿ ಕರ್ನಾಟಕಕ್ಕೆಲ್ಲಾ ಬೆಳಕು ನೀಡುವುದು ಮಾತ್ರವಲ್ಲದೆ, ಜೋಗ ಜಲಪಾತದಿಂದಾಗಿ ಜಗತ್ ಪ್ರಸಿದ್ಧಿಯನ್ನು ಗಳಿಸಿಕೊಂಡಿದ್ದಾಳೆ. ಶರಾವತಿ ನದಿಯ ಮಧ್ಯೆ ಹಲವಾರು ದ್ವೀಪಗಳೂ ಇವೆ. ಶರಾವತಿ ದ್ವೀಪಗಳ ರಾಣಿ' ಎಂಬ ಬಿರುದನ್ನೂ ಪಡೆದುಕೊಂಡಿದ್ದಾಳೆ. ಶರಾವತಿ ನದಿಯಲ್ಲಿ ದೋಣಿಯಲ್ಲಿ ತೇಲುತ್ತಾ ಸಾಗುವುದೇ ಒಂದು ಅಪೂರ್ವ ಅನುಭವ. ಬೆಳದಿಂಗಳ ರಾತ್ರಿಯಲ್ಲಿ ತಂಗಾಳಿಗೆ ಮೈ ಒಡ್ಡಿ ಮಾವಿನಕುರ್ವೆಯಿಂದ ಗುಂಡಬಾಳಾ ನದಿಯಲ್ಲಿ ಡಿಂಗಿಯಲ್ಲಿ ವಿಹಾರ ಮಾಡುವುದು ಒಂದು ಮಧುರ ಕನಸಿನಂತೆ ಅದಕ್ಕೆ ಅದೃಷ್ಟ ಬೇಕು—ಎಂದು ಇಟಲಿಯ ಪ್ರವಾಸಿ ಪಿಟ್ರೊಡೆಲ್ಲಾ ವಾಲ್ಲೆ ಅಕ್ಟೋಬರ್ 31. 1623 ರಲ್ಲಿ ಪ್ರಯಾಣ ಮಾಡಿದ್ದನ್ನು ಬರೆದಿಟ್ಟಿದ್ದಾನೆ. ಕೃತಕತೆ ಇಲ್ಲದ ಶರಾವತಿಯ ಸಹಜ ಸೊಬಗಿಗೆ ಬೆರಗಾಗಿ ಅದರ ರಮಣೀಯ ಸೌಂದರ್ಯವನ್ನು ಸವಿದು ತಾನು ಕೈಗೊಂಡ ಪ್ರಯಾಣದಲ್ಲಿ ಮತ್ತೆಂದೂ ಇಂತಹ ಅನುಭವ ಕಂಡಿಲ್ಲ ಎಂದು ಶರಾವತಿ ನದಿಯನ್ನು ವರ್ಣಿಸಿದ್ದಾನೆ.

ಹೊನ್ನಾವರ-ಶುದ್ಧ ಕನ್ನಡ ಮೂಲದಿಂದಲೇ ಬಂದಿದೆ ಎನ್ನುತ್ತಾರೆ ಪ್ರಾಜ್ಞರು. ಸಂಸ್ಕೃತದಲ್ಲಿ ಸುವರ್ಣಪುರ ಎಂದು ಕರೆಯಲಾಗಿದೆ. ವಿದೇಶಿಯ ಬಾಯಲ್ಲಿ ನೌರಾ, ಒನೋರೆ, ದಿನಾಲುರಾ ಹೋನೋರ್, ಹಾಗೂ ಹೊನಾವೆರಾ ಎಂದೆಲ್ಲಾ ಅಪಭ್ರಂಶಗೊಂಡಿದೆ. ಬ್ರಿಟಿಷರು ತಮ್ಮ ಆಧಿಪತ್ಯದ ನಂತರ ಉತ್ತರಕನ್ನಡ, ದಕ್ಷಿಣ ಕನ್ನಡಗಳನ್ನು ಮದ್ರಾಸು ಪ್ರಾಂತ್ಯಕ್ಕೆ ಸೇರಿಸಿದರು. ಆಗ ಉತ್ತರ ಕನ್ನಡದ ಕೇಂದ್ರ ಹೊನ್ನಾವರ ಆಗಿತ್ತು. 1862 ರಲ್ಲಿ ಉ. ಕ. ಬೇರ್ಪಡಿಸಿ ಮುಂಬೈ ಪ್ರಾಂತ್ಯಕ್ಕೆ ಸೇರಿಸಿದರು. ಈಗ ಉ. ಕ ಜಿಲ್ಲೆಯ 11 ತಾಲೂಕುಗಳಲ್ಲಿ ಘಟ್ಟದ ಕೆಳಗಿನ ಒಂದು ತಾಲೂಕು ಇದಾಗಿದೆ. ಮಂಗಳೂರು–ಮುಂಬಯಿ ಕರಾವಳಿ ಹೆದ್ದಾರಿ ಹೊನ್ನಾವರವನ್ನು ಹಾದು ಹೋಗುತ್ತದೆ.

**ಐತಿಹಾಸಿಕ ಸ್ಥಳ**:– ಕ್ರಿ. ಶ. 150–600 ರ ಅವಧಿಯಲ್ಲಿ ಮೊಟ್ಟಮೊದಲು ಹೊನ್ನಾವರ ಬನವಾಸಿ, ಕದಂಬರ ಆಡಳಿತಕ್ಕೆ ಒಳಪಟ್ಟಿತು. ಮುಂದೆ ಚಾಲುಕ್ಯರು, ರಾಷ್ಟ್ರಕೂಟರು, ವಿಜಯನಗರದ ಅರಸರು ಮತ್ತು ಬಿದನೂರಿನ ಅರಸರು ಈ ಪ್ರದೇಶವನ್ನು ಸ್ವಾಧೀನಪಡಿಸಿಕೊಂಡರು. ಕ್ರಿ. ಶ. 247 ರಲ್ಲಿ ನೌರಾ–ತಮಿಳು ದೇಶದ ಒಂದು ಬಂದರವಾಗಿತ್ತೆಂದು ಗ್ರೀಕ್ ಪೆರಿಪ್ಲಸ್ ಆಪ್ ದಿ ಎರಿತ್ರಿಯಸ್ ಸಿ' ಎಂಬ ಗ್ರಂಥದಿಂದ ತಿಳಿದುಬರುತ್ತದೆ. ಹಾಗೆಯೇ ಹೊನ್ನಾವರವು ಪ್ರಸಿದ್ಧ ಬಂದರು ಆಗಿತ್ತೆಂಬುದನ್ನು ಕ್ರಿ. ಶ. 1273 ರಲ್ಲಿ ಅರಬ್‌ನ ಭೂಗೋಲ ಶಾಸ್ತ್ರಜ್ಞ ಅಬುಲ್‌ಫಿಡಾ, 1342 ರಲ್ಲಿ ಆಫ್ರಿಕನ್ ಪ್ರವಾಸಿ ಇಬನ್‌ಬಟೂಟಾ, 1444 ರಲ್ಲಿ ಪರ್ಷಿಯನ್ ರಾಯಭಾರಿ ಅಬ್ದುಲ್ ರಜಾಕ್ ಮೊದಲಾದವರು ಉಲ್ಲೇಖಿಸಿದ್ದರು. 1514 ರಲ್ಲಿ ಪೋರ್ಚು



ಕರ್ನಲ್ ಕಂಭ

ಗೀಸ್ ಪ್ರವಾಸಿಗನಾದ ಬಾರ್ಬೋಸಾ ಹೊನ್ನಾವರ ಒಂದು ಉತ್ತಮ ಪಟ್ಟಣವಾಗಿತ್ತೆಂದು ದಾಖಲಿಸಿದ್ದಾನೆ. 12 ನೇ ಪೋರ್ಚುಗೀಸ್ ವೈಸರಾಯನಾದ ಡೋಮ್ ಲೂಯಿಸ್ ಹೊನ್ನಾವರದ ನದಿ ದಂಡೆಯಲ್ಲಿ ಬಂದರು ನಿರ್ಮಿಸಿದ್ದನ್ನು, 1590 ರಲ್ಲಿ ಇಲ್ಲಿಗೆ ಬಂದ ಡಚ್ ಪ್ರವಾಸಿ ಜೀನ್ ಹೂಗಸ್ ಡೆಲಿಸನ್ಕೊ ಬಂದರಕ್ಕೆ ಭೇಟಿ ಇತ್ತುದನ್ನು ಬರೆದಿಟ್ಟಿದ್ದಾನೆ. ಪ್ರತೀವರ್ಷ 7000 ದಿಂದ 8000 ಕ್ವಿಂಟಾಲ್ ಮೆಣಸಿನ ಕಾಳು ಬೆಳೆಯುವುದನ್ನೂ, ದೇಶದಲ್ಲೇ ಅತ್ಯುತ್ತಮ ಕಾಳು ಮೆಣಸು ಇಲ್ಲಿಯೇ ಬೆಳೆಯುತ್ತಿದ್ದುದನ್ನೂ, ಗೆರಸೊಪ್ಪೆಯನ್ನೂ ಆಳುತ್ತಿದ್ದ ಚೆನ್ನ ಭೈರಾದೇವಿ 'ಮೆಣಸಿನ ರಾಣಿ' ಎಂದೇ ಪ್ರಸಿದ್ಧಳಾಗಿದ್ದುದನ್ನೂ ಉಲ್ಲೇಖದಲ್ಲಿ ಕಾಣಬಹುದಾಗಿದೆ. 1608 ರಲ್ಲಿ ಇಕ್ಕೇರಿಯ ಹಿರಿಯ ವೆಂಕಟಪ್ಪ ನಾಯಕನು ಚೆನ್ನಭೈರಾದೇವಿಯನ್ನು ಸೋಲಿಸಿ ರಾಜ್ಯವನ್ನು ತನ್ನದಾಗಿಸಿಕೊಂಡನು. ಹೊನ್ನಾವರ ಇಕ್ಕೇರಿಯ ಸಂಸ್ಥಾನಕ್ಕೆ ಸೇರಿದ ನಂತರ ಬಿದನೂರಿನ ರಾಣಿಯನ್ನು ಹೈದರಾಲಿ ಸೋಲಿಸಿ ಹೊನ್ನಾವರವನ್ನು ತನ್ನ ಕೈವಶಮಾಡಿಕೊಂಡನು. ಹೈದರಾಲಿ ಕಾಲದಲ್ಲಿ ಹೊನ್ನಾವರ ಪ್ರಮುಖ ಬಂದರಾಗಿ ಮೆರೆದದ್ದು. ಟಿಪ್ಪುವಿನ ಕಾಲದಲ್ಲಿ ಬ್ರಿಟಿಷರು ಅವನನ್ನು ಸೋಲಿಸಿ ತಮ್ಮ ಸರಕಾರದ ವಶಮಾಡಿಕೊಂಡರು. ಅವರು ಕೂಡಿಕೊಂಡಿದ್ದ ಈ ಜಿಲ್ಲೆಯನ್ನು ವಿಭಾಗ ಮಾಡಿ ಮುಂಬಯಿ ಸರ್ಕಾರಕ್ಕೆ ವರ್ಗಾಯಿಸಿದ ನಂತರ ಹೊನ್ನಾವರ ತನ್ನ ಪ್ರಾಮುಖ್ಯತೆಯನ್ನು ಕಳಕೊಂಡಿತು. ಈಗಿರುವ ನ್ಯಾಯಾಲಯ, ಆಸ್ಪತ್ರೆ ಇರುವ ಜಾಗದಲ್ಲಿ ಕೋಟೆ ಇರುವ ಕುರುಹನ್ನು ಕಾಣಬಹುದು. ಇಲ್ಲಿಂದ ಹೊನ್ನಾವರ ಪೇಟೆಯ ರೂಪುರೇಖೆ, ಶರಾವತಿ ನದಿ, ಹಾಗೂ ಸೇತುವೆ, ಸೂರ್ಯಾಸ್ತ ಎಲ್ಲವನ್ನೂ ನೋಡಬಹುದಾಗಿದೆ. ಹಿಂದಿನ ಕಾಲದ ದೀಪಸ್ತಂಭವೊಂದಿದೆ.

ಹೊನ್ನಾವರದ ಪೂರ್ವಕ್ಕೆ ಅಡ್ಕೊಳಿ, ಮುಂಡಗೋಡ, ಮುಗ್ವ, ಹೊಸಾಕುಳಿ, ಸಾಲ್ಕೋಡು ಎಂಬ ಪಂಚ ಗ್ರಾಮಗಳು ಹರಡಿಕೊಂಡಿವೆ. ಪಶ್ಚಿಮಕ್ಕೆ ಅರಬ್ಬಿ ಸಮುದ್ರ ಭೋರ್ಗರೆದು ಮಲ್ಲುಕುರ್ವೆ ಗ್ರಾಮವನ್ನು ಬಳಸಿದೆ. ದಕ್ಷಿಣಕ್ಕೆ ಶರಾವತಿ ಸಮುದ್ರ ಸೇರುವಲ್ಲಿ ಬಂದರು ಪ್ರದೇಶವಿದೆ. ಹೊನ್ನಾವರ ಪ್ರವೇಶಕ್ಕೆ ಶರಾವತಿ ನದಿಗೆ ಬೃಹದಾಕಾರದ 3440 ಅಡಿ ಉದ್ದ 24 ಅಡಿ ಅಗಲದ 36 ಕಂಬಗಳ 83 ಲಕ್ಷ ರೂಪಾಯಿ ವೆಚ್ಚದಲ್ಲಿ ನಿರ್ಮಿಸಲಾದ ಸೇತುವೆಯೊಂದು ಕೊನೆ ಕ್ಷಣಗಳನ್ನು ನೆನೆಸಿಕೊಂಡು ಪತ್ರಿಕೆ ತುಂಬಾ ಸುದ್ದಿಯಾಗಿದೆ. ಸೇತುವೆಯ ಮೇಲೆ ಸಂಚಾರ ನಿಷೇಧದಿಂದಾಗಿ ಹೊನ್ನಾವರದ ಆರ್ಥಿಕ ಬದುಕಿಗೊಂದು ಹೊಡತ ಬಿದ್ದಿದೆ. ಜನ ಜೀವನ ಅಸ್ತವ್ಯಸ್ತವಾಗಿದೆ.

ಹೊನ್ನಾವರದ ಸಮೀಪದ ಕವಲಕ್ಕಿಯಲ್ಲಿ "ಕುಮಾರ ಕೆಮಿಕಲ್ಸ್" ಅತಿಸಾರ ನಿರೋಧಕ ಔಷಧ ತಯಾರಿಕೆಯ ಅತ್ಯಗತ್ಯವಾದ ಕಚ್ಚಾ ವಸ್ತುವನ್ನು ತಯಾರಿಸಿ ದೇಶದಲ್ಲೇ ಪ್ರಥಮವಾಗಿದೆ. ಪುಟ್ಟ ಹಳ್ಳಿ ಕರ್ಕಿಯಲ್ಲಿ ತಯಾರಾದ ಜನಿವಾರ, ಹೊಸಾಕುಳಿ ವೀಳ್ಯದೆಲೆ ದೇಶದ ಒಳಹೊರಗೂ ಅಪಾರ ಬೇಡಿಕೆ ತಂದುಕೊಟ್ಟಿದೆ.

ಜಾನಪದ ಕಲೆಯಾದ ಯಕ್ಷಗಾನದ ತವರೂರು ಹೊನ್ನಾವರ. ಕರ್ಕಿಯ ಯಕ್ಷಗಾನ ಮೇಳದಿಂದ ಮರಾಠಿ ರಂಗಭೂಮಿ ಪ್ರಭಾವಿತಗೊಂಡಿದೆ. ದೇಶ ವಿದೇಶಗಳಲ್ಲಿ ಕರ್ಕಿಮೇಳ ಸಂಚರಿಸಿ ತನ್ನ ಕಂಪನ್ನು ಪಸರಿಕೊಂಡಿದೆ. ಗುಂಡುಬಾಳದ ಮುಖ್ಯಪ್ರಾಣ ದೇವಾಲಯದ ಎದುರಿನ ರಂಗದಲ್ಲಿ ಸುಮಾರು 4–5 ತಿಂಗಳು ನಿತ್ಯವೂ ಯಕ್ಷಗಾನ ಹರಕೆ ಆಟಗಳು ನಡೆಯುತ್ತಿವೆ. ಹರಕೆ ಆಟ ಆಡಿಸುವವರು ಇಂದು ಬುಕ್ಕಿಂಗ್ ಮಾಡಲು ಹೋದರೆ ಅವರ ಸರದಿ ಬರಲು ಇನ್ನು 13 ವರ್ಷಗಳ ತನಕ ಕಾಯಬೇಕಾಗುತ್ತದೆ. ಅಷ್ಟೊಂದು ಹರಕೆ ಆಟಗಳು ಈಗಾಗಲೇ ಪ್ರದರ್ಶನದ ದಿನಾಂಕಗಳನ್ನೂ ನಿಗದಿಪಡಿಸಿಕೊಂಡಿವೆ. ಯಕ್ಷಗಾನ ಕಲಾವಿದರು ಇಲ್ಲಿ ಕುಣಿಯುವುದರಿಂದ ತರಬೇತಿಯ ಜೊತೆಗೆ ಕಲಾ ನೈಪುಣ್ಯತೆಯನ್ನು ಹೊಂದಿ ಕೀರ್ತಿಯನ್ನು ಗಳಿಸುತ್ತಾರೆ. ದಿ॥ಮುದ್ಕಣಿ ನಾರಾಯಣ ಹೆಗಡೆ, ದಿ॥ ಪರಮಯ್ಯ ಹಾಸ್ಯಗಾರರಿಗೆ ರಾಜ್ಯ ಪ್ರಶಸ್ತಿ ಸಿಕ್ಕಿದರೆ ಕೆರೆಮನೆ ಶಿವರಾಮ ಹೆಗಡೆಯವರಿಗೆ ರಾಷ್ಟ್ರಪ್ರಶಸ್ತಿ ದೊರಕಿದೆ. ಶ್ರೀ ಜಲವಳ್ಳಿ ವೆಂಕಟೇಶರಾವ್ ರವರು ಇತ್ತೀಚೆಗೆ ಸಂಗೀತ ನಾಟಕ ಅಕಾಡಮಿಯಿಂದ ಪುರಸ್ಕೃತರಾಗಿದ್ದಾರೆ. ಕೆರೆಮನೆ ಮಹಾಬಲ ಹೆಗಡೆ, ಕೆರೆಮನೆ ಶಂಭು ಹೆಗಡೆ, ದಿ॥ ಗಜಾನನ ಹೆಗಡೆ, ಚಿಟ್ಟಾಣಿ ರಾಮಚಂದ್ರ ಹೆಗಡೆ, ಕೊಂಡದ ಕುಳಿ ರಾಮಚಂದ್ರ ಹೆಗಡೆ, ಪಿ. ವಿ. ಹಾಸ್ಯಗಾರರು, ಕಡತೋಕ ಮಂಜುನಾಥ ಭಾಗ್ವತರು, ಕೃಷ್ಣ ಭಾಗ್ವತರು ಹೀಗೆ ಹಲವಾರು ಮಂದಿ ಈ ತಾಲೂಕಿನ ಯಕ್ಷಗಾನದ ದಿಗ್ಗಜರೆನಿಸಿಕೊಂಡಿದ್ದಾರೆ. ಶ್ರೀ ಇಡಗುಂಜಿ ಮಹಾಗಣಪತಿ ಯಕ್ಷ

---

**ಮುಖಪುಟ ಲೇಖನ:**

# "ಕೀರ್ತಿ ಶಿಖರದತ್ತ ರಾಷ್ಟ್ರೀಯ ಈಜುಗಾರ್ತಿ ಕುಮಾರಿ ಶಿಲ್ಪ

ಕುಟುಂಬದ ಹಿರಿಮೆ ಗರಿಮೆಗಳಿಂದ ಕೆಲವು ಮಕ್ಕಳು ಮುಂದುವರೆಯುವುದನ್ನು ಕಂಡರೆ ಮಕ್ಕಳ ಹಿರಿಮೆಗಳಿಂದ ಕೆಲವು ಕುಟುಂಬಗಳು ಕೀರ್ತಿಗಳಿಸಿರುವುದನ್ನು ಕಾಣಬಹುದು. ಎರಡನೆಯ ಸ್ತರಕ್ಕೆ ಮೈಸೂರಿನ ರಾಷ್ಟ್ರೀಯ ಈಜುಗಾರ್ತಿ ಕುಮಾರಿ ಶಿಲ್ಪ ಒಳ್ಳೆಯ ಉದಾಹರಣೆ: ಕೇವಲ ಹನ್ನೊಂದು ವಸಂತಗಳ ಈ ಕಿಶೋರಿ ಸಾಧನೆಯ ಹಾದಿಯಲ್ಲಿ ಮುನ್ನಡೆದು ಉತ್ತಮ ಗುರಿ ತಲುಪಿದ್ದಾಳೆ.

ಕುಮಾರಿ ಶಿಲ್ಪ ದಸರಾ ಕ್ರೀಡೋತ್ಸವದಲ್ಲಿ ಪಾಲ್ಗೊಂಡು ಕಳೆದ ಎರಡು ವರ್ಷಗಳಿಂದಲೂ 'ಮಹಿಳಾ ಮತ್ತು ಈಜು ಸ್ಪರ್ಧೆ'ಯಲ್ಲಿ ಭಾಗವಹಿಸಿ ವಿಭಾಗೀಯ ಮಟ್ಟದಲ್ಲಿ ದ್ವಿತೀಯ ಬಹುಮಾನ ಗಳಿಸಿದ್ದಾಳೆ. ಸರಳ ನಡೆ-ನುಡಿಯ ಶಿಲ್ಪ ಹಲವಾರು ಸ್ಪರ್ಧೆಗಳಲ್ಲಿ ವಿಜೇತಳಾಗಿ ವಿಜಯಗಳ ಸರಮಾಲೆಯನ್ನು ಹೊಂದಿದ್ದಾಳೆ. ಯುವಜನ ಸೇವಾ ಇಲಾಖೆ ನಡೆಸಿದ ಸ್ಪರ್ಧೆಗಳಲ್ಲೂ, ರೋಟರಿ ಮುಂತಾದ ಸಂಸ್ಥೆಗಳು ನಡೆಸಿದ ಸ್ಪರ್ಧೆಗಳಲ್ಲೂ ಶಿಲ್ಪ ವಿಜಯಶಾಲಿಯಾಗಿದ್ದಾಳೆ. ಈಕೆಯ ಮನೆಯಲ್ಲಿ ಈಕೆ ಗಳಿಸಿದ ಪ್ರಶಸ್ತಿ, ಬಹುಮಾನ, ಅಭಿನಂದನಾ ಪತ್ರಗಳೇ ತುಂಬಿ ಹೋಗಿವೆ. ಕುಮಾರಿ ಶಿಲ್ಪ ನೀರಿನಲ್ಲಿ ಮೀನಿನಂತೆ ಈಜಬಲ್ಲಳು. ಆಕೆಯ ವೇಗವನ್ನು ಕಂಡು ಚಕಿತರಾದವರೇ ಹೆಚ್ಚು.

ಶಿಲ್ಪ ಈಜುಗಾರ್ತಿಯಾದುದೇ ಒಂದು ಕಥೆ. ಈಕೆಯ ಹೇಳುವಂತೆ ಮೈಕಟ್ಟಿಲ್ಲದ ಅವಳನ್ನು ತಂದೆ-ತಾಯಿಂದಿರು ಈಜು ಕಲಿಯಲು ಕಳುಹಿಸಿದರಂತೆ, ದೇಹದ ದಾರ್ಢ್ಯಕ್ಕಾಗಿ ಈಜನ್ನು ಗೆಳತಿರುರೊಡನೆ ಆರಂಭಿಸಿದಳಂತೆ. ಆದರಿಂದ ಆರೋಗ್ಯ ಮೊದಲು ಹದಗೆಟ್ಟರೂ ಕ್ರಮೇಣ ಅದು ಆನಂದ ನೀಡಿತಂತೆ. ಈಜುವುದನ್ನು ಆಟವನ್ನಾಗಿ ಸ್ವೀಕರಿಸಿದಾಗ ಅದು ಫಲಕಾರಿಯಾಯಿತಂತೆ. "ಮುಂದೆ ಮೈಸೂರು ವಿಶ್ವವಿದ್ಯಾನಿಲಯದ ಈಜು ಕೊಳಕ್ಕೆ ಸದಸ್ಯಳಾಗಿ ಸಾಧನೆಯನ್ನು ಮುಂದುವರೆಸಿದಾಗ



ಶ್ರೀ ಹನುಮಂತಪ್ಪ ಮತ್ತು ಶ್ರೀ ಪುಟ್ಟಸ್ವಾಮಿ ಅವರ ಮಾರ್ಗದರ್ಶನದಿಂದ ನಾನು ಉತ್ತಮ ಈಜುಗಾರ್ತಿಯಾದೆ. ತಂದೆ-ತಾಯಿಂದರ ಸಹಕಾರದಿಂದ ಆರೋಗ್ಯವಂತಳೂ ಆದೆ, ಪ್ರಶಸ್ತಿಗಳನ್ನೂ ಗಳಿಸಿದೆ" ಎಂದು ಹೇಳುತ್ತಾಳೆ.

ಶಿಲ್ಪರವರ ತಂದೆ ಸಿ. ಡಿ. ರಾಮಚಂದ್ರ ಅವರು ಉತ್ತಮ ಕ್ರೀಡಾಪಟು, ಮಗಳಿಗೆ ಈಜಲು ಸಲಹೆ ನೀಡಿದ ಮೊದಲ ಗುರು ಶ್ರೀಮತಿ ಪ್ರೇಮ ಅವರೇ. ಶಿಲ್ಪಳ ತಾಯಿ, ತಮ್ಮ ಮಗಳ ಆರೋಗ್ಯದ ಬಗ್ಗೆ ಅತೀವ ಕಳಕಳಿಯಿದ್ದ ಕಾರಣ ಈಜಾಟಕ್ಕೆ ಹೋಗಲು ಅನುವು ಮಾಡಿಕೊಟ್ಟರು. ಮುಂದೆ ಖ್ಯಾತ ಈಜು ಮಾರ್ಗದರ್ಶಕರಾದ ನಾಭಿರಾಜ್ ನೀಡಿದ ಮಾರ್ಗದರ್ಶನ ಆಕೆ ರಾಷ್ಟ್ರೀಯ ಈಜುಗಾತಿಯಾಗಲು ಕಾರಣವಾಯಿತು. ಅವರ ಕುಟುಂಬದವರೆಲ್ಲರೂ ಶಿಲ್ಪಳ ಬಗೆಗೆ ಅತೀವ ಆಸಕ್ತಿ ಉಳ್ಳವರಾಗಿದ್ದಾರೆ, ಹಾಗೆಯೇ ಪ್ರೋತ್ಸಾಹವೂ ಕೂಡ ಒದಗಿ ಬರುತ್ತಿರುವುದು ಆಕೆಯ ಸುಯೋಗ.

ರಾಜ್ಯಮಟ್ಟದ ಈಜು ಸ್ಪರ್ಧೆಯಲ್ಲಿ ಪ್ರಥಮವಾಗಿ ಭಾಗವಹಿಸಿ ಬಹುಮಾನ ಗಿಟ್ಟಿಸಿದ ಈ ಕಿರಿಯ ಈಜುಗಾರ್ತಿ ಹಿರಿಯ ಸಾಧಕರ ಲಕ್ಷಣವನ್ನು ಹೊಂದಿದ್ದಾಳೆ. ಮೈಸೂರಿನ ರೋಟರಿ ವಿದ್ಯಾಸಂಸ್ಥೆಯಲ್ಲಿ ವ್ಯಾಸಂಗ ಮಾಡುತ್ತಿರುವ ಕುಮಾರಿ ಶಿಲ್ಪಳಿಗೆ ಉಜ್ವಲ ಭವಿಷ್ಯವಿದೆ.

**—ಮಾನಸ ಜೈನಹಳ್ಳಿ ಸತ್ಯನಾರಾಯಣ ಗೌಡ**

ಚಿತ್ರ: **ಶಿಪ್ರೇಸ್ವಾಮಿ**

ಗಾನ ಮಂಡಳಿ, ಕರ್ಕಿ ಮೇಳ, ಕೊಂಡದಕುಳಿ ಮೇಳ, ಮಾವಿನಕುರ್ವೆ ಮೇಳಗಳು ಉತ್ತರ ಕನ್ನಡದ ಹೆಸರಾಂತ ಮೇಳಗಳು. ಶ್ರೀ ಇಡಗುಂಜಿ ಮೇಳದ ಬಗ್ಗೆ ಅಭ್ಯಸಿಸಿ ಪಿ. ಎಚ್. ಡಿ. ಗಳಿಸಲು ಒಬ್ಬರು ತಯಾರಾಗಿದ್ದಾರೆ. ಹೊನ್ನಾವರದ ಶೃಂಗಾರ ಮಂಟಪ ಯಕ್ಷಗಾನಕ್ಕೆ ಪ್ರೋತ್ಸಾಹ ಕೊಡುತ್ತಾ ಬಂದಿದೆ.

ಹೊನ್ನಾವರದ ವಿಠಲ ಗುಡಿಗಾರರು ತಮ್ಮ ಕೆತ್ತನೆಯ ಕಾಳಿಂಗ ಮರ್ದನ ಮೂರ್ತಿಗೆ ಕೇಂದ್ರ ಸರಕಾರದಿಂದ ಪುರಸ್ಕಾರ ಪಡೆದಿದ್ದಾರೆ. ಇಲ್ಲಿನ ಗುಡಿಗಾರರಿಂದ ಕೆತ್ತಲಾದ ಗಂಧದ ಮೂರ್ತಿಗಳಿಗೆ ದೇಶವಿದೇಶಗಳಿಂದ ಅಪಾರ ಬೇಡಿಕೆ ಬರುತ್ತಿದೆ.

ಹೊನ್ನಾವರದ ಪುರಾತನ ಕ್ರೈಸ್ತ ದೇವಾಲಯ ಶರಾವತಿ ದಂಡೆಯ ಮೇಲಿದ್ದು ಜನರ ಗಮನ ಸೆಳೆಯುತ್ತದೆ.

ಹೊನ್ನಾವರದ ಸುತ್ತುಮುತ್ತಲಿನ ಪ್ರೇಕ್ಷಣೀಯ ಸ್ಥಳಗಳ ಸಂಕ್ಷಿಪ್ತ ಪರಿಚಯ ಇಲ್ಲಿದೆ.

**ರಾಮತೀರ್ಥ** :– ಪೇಟೆಯಿಂದ ಸುಮಾರು ಎರಡು ಕಿ. ಮೀ. ದೂರದ ಚಂದಾವರ ರಸ್ತೆಯಲ್ಲಿದೆ. ಎಲ್ಲ ಕಾಲದಲ್ಲೂ ಹರಿದು ಬರುವ ಜಲಧಾರೆ. ಒಂದು ಜಲಧಾರೆಯನ್ನು ರಾಮತೀರ್ಥವೆಂತಲೂ, ಇನ್ನೊಂದನ್ನು ಲಕ್ಷ್ಮಣತೀರ್ಥವೆಂತಲೂ ಕರೆಯುತ್ತಾರೆ. ಸುಮಾರು ಎಂಟು ಅಡಿ ಎತ್ತರದಿಂದ ಧುಮುಕುವ ನೀರಿಗೆ ತಲೆ ಕೊಟ್ಟು ಸ್ನಾನಮಾಡಲು ಪ್ರತಿನಿತ್ಯವೂ ಅಧಿಕ ಸಂಖ್ಯೆಯಲ್ಲಿ ಜನರು ಇಲ್ಲಿಗಾಗಮಿಸುತ್ತಾರೆ. ದಿನದ 24 ತಾಸೂ ಇದರಡಿ ಕುಳಿತು ಆನಂದಿಸಲು ಮನಸ್ಸಾದರೂ ಇತರರು ತಮ್ಮ ಸರತಿಗಾಗಿ ಕಾಯುತ್ತಿರುವಾಗ ನೀವು ಜಾಗ ಖಾಲಿಮಾಡಬೇಕಾಗುತ್ತದೆ. ರಸ್ತೆಯಿಂದ ರಾಮತೀರ್ಥಕ್ಕೆ ತಲಪಲು 108 ಮೆಟ್ಟಲು ಕೆಳಗಿಳಿಯಬೇಕು. ಖನಿಜಾಂಶಗಳನ್ನೊಳಗೊಂಡ ಈ ತೀರ್ಥದಲ್ಲಿ ಸ್ನಾನ ಮಾಡಿದರೆ ಚರ್ಮರೋಗ, ಮಾನಸಿಕ ರೋಗಗಳು ಗುಣವಾಗುತ್ತದಂತೆ. ಸನಿಹದಲ್ಲಿ ರಾಮೇಶ್ವರ ದೇವಾಲಯವಿದೆ.

**ಬಸವರಾಜ ದುರ್ಗ** :– ಅರಬ್ಬೀ ಸಮುದ್ರದಿಂದ ಸುತ್ತುವರಿದ ಸುಮಾರು ಆರು ಮೈಲು ಸುತ್ತಳತೆಯ ದ್ವೀಪ, ಹೊನ್ನಾವರದಿಂದ ನೋಡಲು ಹತ್ತಿರವೇ ಕಂಡರೂ ಸುಮಾರು 3 ಮೈಲು ದೂರದಲ್ಲಿದೆ. ನೀರಿನಲ್ಲಿ ತೇಲುವಂತೆ ಕಾಣುವ ಈ ದುರ್ಗ ತಲುಪಲು ದೊಡ್ಡ ಸಾಹಸವನ್ನೇ ಮಾಡಬೇಕಾಗುತ್ತದೆ. ಕೆಳದಿಯ ಬಸವರಾಜನು ಇಲ್ಲಿ ಕೋಟೆ ಕಟ್ಟಿದ್ದರಿಂದ ಅದಕ್ಕೆ ಬಸವರಾಜ ದುರ್ಗ ಎಂಬ ಹೆಸರು ಬಂತು. ಸುಣ್ಣ, ಗಾರೆ ಮಾತ್ರ ಉಪಯೋಗಿಸಿ ಕಟ್ಟಿದ ಕೋಟೆ ಈಗಲೂ ಚೆನ್ನಾಗಿ ಇದೆ. ಆದರೆ ಗಿಡಗಂಟೆಗಳು ಆವರಿಸಿಕೊಂಡು ಕಾಲಿಡಲು ಜಾಗವಿಲ್ಲವಾಗಿದೆ. ಶಿವರಾತ್ರಿಯಂದು ಇಲ್ಲಿ ಪೂಜೆ ಸಲ್ಲಿಸಲು ಬರುತ್ತಾರೆ. ಉಪ್ಪುನೀರಿನ ಸಮುದ್ರ ನಡುವೆಯೂ ಇಲ್ಲಿ ಸಿಹಿನೀರಿನ ಬಾವಿ ಇರುವುದೊಂದು ವಿಶೇಷ. ಜನ ಸಂಚಾರವೇ ಇಲ್ಲದ ಈ ದುರ್ಗ ಬಹಳ ಹಿಂದೆ ವ್ಯಾಪಾರಿ ಕೇಂದ್ರವಾಗಿತ್ತಂತೆ. ಪ್ರವಾಸಿ ಕೇಂದ್ರವಾಗಿ ಈ ನಡುಗಡ್ಡೆಯನ್ನು ರೂಪಿಸಿದರೆ ಉತ್ತಮ ವಿಹಾರ ಕೇಂದ್ರವಾಗಿ ಬೆಳೆಯುವುದರಲ್ಲಿ ಸಂಶಯವಿಲ್ಲ.

**ಅಪ್ಸರಕೊಂಡ** : ಹೊನ್ನಾವರ ಪಟ್ಟಣದಿಂದ ದಕ್ಷಿಣಕ್ಕೆ ಅರಬ್ಬೀ ಸಮುದ್ರಕ್ಕೆ ಮುಖಮಾಡಿ ಸುಮಾರು 50 ಅಡಿ ಎತ್ತರದಿಂದ ಧುಮುಕುವ ಜಲಪಾತ ನಯನ ಮನೋಹರ. ಮಳೆಗಾಲದಲ್ಲಿ ಮಾತ್ರ ಜೀವಂತವಿರುವ ಜಲಪಾತಕ್ಕೆ ಹಿಂದೆ ಅಪ್ಸರ ಸ್ತ್ರೀಯರು ಸ್ನಾನ ಮಾಡಿದ್ದರೆಂಬ ಐತಿಹ್ಯದಿಂದ ಈ ಹೆಸರು ಬಂದಿದೆಯಂತೆ. ಜಲಪಾತವನ್ನು ನೋಡುತ್ತಾ ಇದ್ದರೆ ಅಪ್ಸರ ಸ್ತ್ರೀ ಇಳಿದುಕೊಂಡು ಬಂದಂತೆ ಭಾಸವಾಗುತ್ತದೆ. ತೀರ್ಥಹಳ್ಳಿ ರಾಮಚಂದ್ರ ಮಠಕ್ಕೆ ಸೇರಿದ ಮಠವೊಂದು ಇಲ್ಲಿದೆ. ಅಮ್ಮನವರ ದೇವಾಲಯ, ಪಾಂಡವರ ಗುಹೆ ಅಲ್ಲದೆ ಬೆಟ್ಟದ ತುಂಬಾ ಚಿಕ್ಕಪುಟ್ಟ ಗುಹೆಗಳಿವೆ. ಮ್ಯಾಂಗನೀಸ್ ಅದಿರು ತೆಗೆಯುತ್ತಿರುವುದರಿಂದ ಈಗ ಗುಹೆಗಳು ಮಾಯವಾಗ ತೊಡಗಿವೆ. ಬೆಳಿಗ್ಗೆ ಮರದಡಿ ವಿಶ್ರಾಂತಿ ತೆಗೆದುಕೊಂಡು ಮಧ್ಯಾಹ್ನ ಬಿಸಿಲಿನ ಝಳಕ್ಕೆ ಅಪ್ಸರಕೊಂಡದಲ್ಲಿ ಸ್ನಾನಮಾಡಿ ಸಂಜೆ ಹೊತ್ತು ಬೆಟ್ಟವೇರಿ ಸೂರ್ಯಾಸ್ತ ನೋಡುತ್ತಾ ವಿಹಾರ ಮಾಡಬಹುದು. ವಾಹನವಿಲ್ಲದವರು 4 ಕಿ. ಮಿ. ಕಾಲ್ನಡೆಯಲ್ಲಿ ಹೋಗಬೇಕಾಗುತ್ತದೆ. ಹೊಟ್ಟೆಗೆ ಬುತ್ತಿ ಕಟ್ಟಿಕೊಂಡು ಹೋಗಲು ಮರೆಯಬೇಡಿ.

**ಕರ್ನಲ್ ಹಿಲ್** : ಇದು ಪಟ್ಟಣದೊಳಗೆ ಜೋಗ ಮಠದಗುಡ್ಡೆಯಲ್ಲಿದ್ದು ಎಲ್ಲಿ ನೋಡಿದರೂ ತಾಸಿರುವ ಕುರುಹನ್ನು ಎತ್ತಿ ತೋರಿಸುತ್ತಾ ನಿಂತಿದೆ. 1845 ರಲ್ಲಿ ಗೇರಸೊಪ್ಪೆ ಬ್ರಿಟಿಷ್. ಸೈನ್ಯಾಧಿಕಾರಿ ಜನರಲ್ ಕರ್ನಲ್ ಹಿಲ್ ಎಂಬವನು ಸತ್ತಾಗ ಅವನ ಶವವನ್ನು ಇಲ್ಲಿ ತಂದು ಸಮಾಧಿ ಮಾಡಿ ಅವನ ನೆನಪಿಗೆ ಈ ಸ್ಮಾರಕವನ್ನು ಕಟ್ಟಿದ್ದಾರೆ. ಕರ್ನಲ್‌ನ ಗುಣಗಾನ ಮಾಡುವ ಶಿಲಾಲೇಖ ಹಾಗೂ ಉಬ್ಬು ಕಲಾಕೃತಿ ಇಲ್ಲಿದೆ. ಎರಡು ಕಿರು ಖಡ್ಗಗಳನ್ನೂ ಚಿತ್ರಿಸಲಾಗಿದೆ. ಸುಮಾರು ಒಂದು ತೆಂಗಿನ ಮರದಷ್ಟೆತ್ತರವಿರುವ ಈ ವೀರಗಂಬದ ಹೂದಾನಿ ಆಕಾರದ ಜಟ್ಟನ್ನು ನೋಡಿದಾಗ ತಲೆ ಗಿರ್ರೆಂದು ತಿರುಗುತ್ತದೆ.

ಹೊನ್ನವರದ ಸುತ್ತುಮುತ್ತ ಗೋಕರ್ಣ, ಕುಮಟಾ, ಗುಣವಂತೇಶ್ವರ, ಧಾರೇಶ್ವರ, ಮುರುಡೇಶ್ವರ, ಇಡಗುಂಜಿ, ಕರಿಕಾನ ಪರಮೇಶ್ವರಿ, ಗೇರಸೊಪ್ಪೆಯ ಬಸದಿ, ಶರಾವತಿ ತೇಲರೇಸ್, ಜೋಗ, ಚಂದಾವರ, ಹೈಗುಂದ, ಸುಬ್ರಹ್ಮಣ್ಯ, ಸಂಗೀತಪುರ ಹೀಗೆ ಹಲವಾರು ಪ್ರೇಕ್ಷಣೀಯ ಸ್ಥಳಗಳೂ ಇವೆ. **

## ಶ್ರೀಮತಿ ಕೌಸಲ್ಯಾಮೂರ್ತಿ



ಸಾಧಾರಣವಾಗಿ ಹೆಣ್ಣುಮಕ್ಕಳು ಕ್ರೀಡೆಯನ್ನು ತಮ್ಮ ಹವ್ಯಾಸವನ್ನಾಗಿ ಮಾಡಿಕೊಳ್ಳುವುದು ಅಪರೂಪ. ಶಾಲಾ ಕಾಲೇಜು ದಿನಗಳಲ್ಲಿ ಉತ್ಸಾಹದಿಂದಲೇ ಆಡುತ್ತಾರೆ. ಗೃಹಿಣಿಯಾದರಂತೂ ಕ್ರೀಡಾಕ್ಷೇತ್ರಕ್ಕೆ ತಿಲಾಂಜಲಿ ನೀಡುತ್ತಾರೆ, ಆದರೆ ಕೆಲವೇ ಗೃಹಿಣಿಯರು ಕ್ರೀಡೆಯನ್ನು ತಮ್ಮ ಯಶಸ್ವೀ ಹವ್ಯಾಸವನ್ನಾಗಿ ಮಾಡಿಕೊಂಡು ಮುಂದುವರಿಯುತ್ತಾರೆ. ಇಂತಹವರಲ್ಲಿ ಬೆಂಗಳೂರಿನ ಶ್ರೀಮತಿ ಕೌಸಲ್ಯಾಮೂರ್ತಿಯವರೂ ಒಬ್ಬರು. ಪ್ರಸಿದ್ಧ ಅಥ್ಲೀಟ್ ಆಗಿ 1500 ಮೀಟರ್ ಓಟ, ಡಿಸ್ಕಸ್ ಎಸೆತ, ಷಾಟ್ ಪುಟ್, ಈ ಆಟಗಳಲ್ಲಿ ಮೇಲುಗೈ ಸ್ಥಾಪಿಸಿದ್ದಾರೆ. ವೆಟರನ್ ಅಥ್ಲೆಟಿಕ್ ಮೀಟ್ 1990 ರಲ್ಲಿ ನಡೆದ ಆಟೋಟಗಳಲ್ಲಿ ಎಲ್ಲದರಲ್ಲೂ ವಿಕ್ರಮ ಸ್ಥಾಪಿಸಿ ರಾಷ್ಟ್ರೀಯ ಪ್ರಶಸ್ತಿ ಗಳಿಸಿ ವಿದೇಶಕ್ಕೆ ಹೋಗಲು ಅರ್ಹ ಅಭ್ಯರ್ಥಿಯಾಗಿದ್ದಾರೆ.

ಕಲಾಕುಶಲತೆಯಲ್ಲೂ ಪರಿಣತಿ ಇದೆ. ಈಕೆ ಪ್ರತಿ ವರ್ಷವೂ ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಸ್ಪರ್ಧಿಯಾಗಿ ಏನಾದರೊಂದು ಕುಶಲ ಕೆಲಸವನ್ನು ಮಾಡಿ ತೋರಿಸುತ್ತಾರೆ. ಇಕೆಬಾನಾ ಹೂ ಜೋಡಣೆಯಲ್ಲಿ ಸಿದ್ಧಹಸ್ತೆಯಾಗಿರುವುದರಿಂದ ಪ್ರತಿ ವರ್ಷವೂ ಲಾಲ್‌ಬಾಗ್ ಹೂ ಮತ್ತು ತರಕಾರಿ ಸ್ಪರ್ಧೆಗಳಲ್ಲಿ ತೀರ್ಪುಗಾರರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಜಯನಗರ ಬೆಂಗಳೂರು, ಸ್ತ್ರೀ ಸಮಾಜದ ಕಾರ್ಯದರ್ಶಿನಿ, ಲಯನ್ ಮಹಿಳಾ ಸದಸ್ಯೆ, ವನಿತಾ ವಿದ್ಯಾ ಸಂಸ್ಥೆಯ ಕಾರ್ಯಕಾರಿ ಸದಸ್ಯೆ, ಮಹಿಳಾ ವಸತಿ ಗೃಹದ ಆಡಳಿತ ಮಂಡಳಿಯ ಸೇವಾಕರ್ತೆ ದೇವಗಿರಿ ಬ್ರಾಹ್ಮಣ ಸೇವಾಸಂಘದ ಸಕ್ರಿಯ ಭಗಿನಿ, ತೇಜಸ್ವಿನೀ ಮಹಿಳಾ ಸಂಘದ ಕಾರ್ಯದರ್ಶಿನಿ, ಆಗಿ ನಗರದ ನಾನಾ ಸಂಘ ಸಂಸ್ಥೆಗಳೊಡನೆ ಸಂಪರ್ಕವನ್ನು ಇರಿಸಿಕೊಂಡಿದ್ದಾರೆ. ಕ್ರಿಯಾಶೀಲೆ, ಪ್ರತಿಭಾನ್ವಿತೆ. ಇದರ ಜೊತೆಗೆ, ಫಲಸಂಸ್ಕರಣ, ಬೇಕರಿ, ಗೃಹಾಲಂಕಾರ, ಇವುಗಳಲ್ಲೂ ವಿಶೇಷವಾದ ತರಬೇತಿ ಪಡೆದಿದ್ದಾರೆ. ಉತ್ತಮ ಬೆರಳಚ್ಚು ಶೀಘ್ರ ಲಿಪಿಗಾರರೂ ಆಗಿದ್ದಾರೆ. ಸಂಗೀತದಲ್ಲೂ ಸಾಕಷ್ಟು ಪರಿಣತಿ ಇದೆ. ಈಗಾಗಲೇ ಸುಮಾರು 25 ನಾಟಕಗಳಲ್ಲಿ ಅಭಿನಯಿಸಿ ಪ್ರಶಸ್ತಿಯನ್ನು ಗಳಿಸಿಕೊಂಡಿದ್ದಾರೆ.

ಈಗ ಹೆಚ್ಚಿನ ಸಮಯವನ್ನೆಲ್ಲಾ ಕ್ರೀಡಾಂಗಣದಲ್ಲೇ ಕಳೆಯುತ್ತಿದ್ದಾರೆ. ಇವರಿಗೆ ಗೃಹಿಣಿಯಾಗಿರುವ ಮಗಳೂ, ಉದ್ಯಮಿಯಾಗಿರುವ ಮಗನೂ ಇದ್ದಾರೆ.

**—ಶಾರದಾ ಶಾಮಣ್ಣ, ಬೆಂಗಳೂರು**

# ಭರವಸೆ ನೀಡುವ ರಂಗಪ್ರವೇಶ

ಹಿರಿಯ ನೃತ್ಯಗಾತಿಯರಾದ ಮಂಜು ಭಾರ್ಗವಿ ಮತ್ತು ವಾಣೀ ಗಣಪತಿ ಅವರ ಸಮ್ಮುಖದಲ್ಲಿ ರಂಗಪ್ರವೇಶ ಮಾಡಿದ ಕುಮಾರಿ ಆಶಾ ರಂಗಧಾಮ್ ತನ್ನ ನೃತ್ಯ ಪ್ರತಿಭೆಯಿಂದ ಸಭಿಕರನ್ನು ರಂಜಿಸಿದಳು. ಸ್ವತಃ ನೃತ್ಯಪಟುವಾದ ಚಿತ್ರನಟಿ ಶ್ರೀಧರ್ ಹಾಗೂ ತಾರೆ ಪಂಢರೀಬಾಯಿ ಕುಮಾರಿ ಆಶಾಳ ಪ್ರತಿಭೆಗೆ ಮೆಚ್ಚುಗೆ ವ್ಯಕ್ತಪಡಿಸಿ ಶುಭ ಹಾರೈಸಿದರು.

ಬೆಂಗಳೂರಿನ ಚೌಡಯ್ಯ ಹಾಲ್‌ನಲ್ಲಿ ಇತ್ತೀಚೆಗೆ ನಡೆದ 'ರಂಗ ಪ್ರವೇಶ' ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷ ಸಿ. ವಿ. ಎಲ್. ಶಾಸ್ತ್ರಿ ವಹಿಸಿದ್ದರು. ಪ್ರಾರಂಭದಲ್ಲಿ ಮಂಜು ಭಾರ್ಗವಿ ಜ್ಯೋತಿ ಬೆಳಗಿ ಕಾರ್ಯಕ್ರಮವನ್ನು ಉದ್ಘಾಟಿಸಿದರು.



ತಾರೆ ಪಂಢರಿಬಾಯಿ ಅವರೊಂದಿಗೆ ಆಶಾ ಮತ್ತು ಬೇಬಿ ಅಂಜಲಿ



ಕುಮಾರಿ ಆಶಾ ರಂಗಧಾಮ್

ಸಾಂಪ್ರದಾಯಿಕ ತೋಡಯಂ, ಶ್ಲೋಕ ಹಾಗೂ ಅಲರಿಪು ಕಾರ್ಯಕ್ರಮವನ್ನಾರಂಭಿಸಿದ ಆಶಾ ಮುಂದೆ ಜತಿಸ್ವರ ಹಾಗೂ ಶಬ್ದಂ ನೃತ್ಯಗಳ ನಂತರ ನವರಾಗಮಾಲಿಕೆಯ ವರ್ಣಕ್ಕೆ ನರ್ತಿಸಿದಳು. ಕ್ಲಿಷ್ಟವಾದ ವರ್ಣದಲ್ಲಿ ತನ್ನ ಅದ್ಭುತ ಪ್ರತಿಭೆಯನ್ನು ಮೆರೆದ ಆಶಾ ಪುರಂದರ ದಾಸರ ದೇವರ ನಾಮ 'ಪೋಗದಿರಲೋ ರಂಗ' ನೃತ್ಯದಲ್ಲಿ ತನ್ನ ಸೋದರಿ ಬೇಬಿ ಅಂಜಲಿಯೊಡನೆ ಭಾವಪೂರ್ಣ ಅಭಿನಯ ವ್ಯಕ್ತಪಡಿಸಿದಳು. ತಿಲ್ಲಾನಾ, ಮೀರಾ ಭಜನ್, ಕೊರವಂಜಿ ನೃತ್ಯಗಳ ನಂತರ ರುದ್ರತಾಂಡವದೊಡನೆ ಕಾರ್ಯಕ್ರಮ ಮುಗಿಯಿತು.

ಗುರು ಶ್ರೀಮತಿ ಸಂಧ್ಯಾ ಕೇಶವರಾವ್ ಅವರ ನಟ್ಟುವಾಂಗ, ಎಚ್. ಕೆ. ನಾರಾಯಣ ಅವರ ಗಾಯನ, ನಾರಾಯಣಸ್ವಾಮಿಯವರ ಮೃದಂಗ, ಚಂದ್ರಶೇಖರ್ ಅವರ ಪಿಟೀಲು, ಕೆ. ಸಿ. ಅಶ್ವತ್ಥ-ನಾರಾಯಣ ಅವರ ಕೊಳಲು ಹಾಗೂ ಶಾಮಣ್ಣ ಅವರ ವೀಣೆ ನೃತ್ಯ ಕಾರ್ಯಕ್ರಮಕ್ಕೆ ಒಳ್ಳೆಯ ಹಿಮ್ಮೇಳ ಒದಗಿಸಿತ್ತು.

ನಗರದ ಕ್ಲೂನೀ ಕಾನ್ವೆಂಟ್‌ನಲ್ಲಿ ಹೈಸ್ಕೂಲ್ ಶಿಕ್ಷಣ ಮುಗಿಸಿ ವಿಜಯಾ ಕಾಲೇಜ್‌ನಲ್ಲಿ ಪಿ. ಯು. ಸಿ. ವ್ಯಾಸಂಗ ಮಾಡುತ್ತಿರುವ 16 ವರ್ಷಗಳ ಕಿಶೋರಿ ಆಶಾ ಡಾ॥ ಕೆ. ಎಂ. ರಂಗಧಾಮ ಶೆಟ್ಟಿ ಹಾಗೂ ಡಾ॥ ವಾಸವಿ ರಂಗಧಾಮ ಅವರ ಪುತ್ರಿ. ಸಮಾರಂಭಕ್ಕೆ ಬಂದಿದ್ದ ಹಿರಿಯ ನೃತ್ಯಪಟು ಯು. ಎಸ್. ಕೃಷ್ಣಾರಾವ್, ಎ. ಕೆ. ಅತ್ರೆ ಅವರುಗಳು ಆಶಾಳ ಪ್ರತಿಭೆಯನ್ನು ಪ್ರಶಂಸಿಸಿ ಅವಳಿಗೆ ಉಜ್ವಲ ಭವಿಷ್ಯವಿದೆ ಎಂದು ನುಡಿದರು. •



ತಾರೆ ಮಂಜು ಭಾರ್ಗವಿ ಜ್ಯೋತಿ ಬೆಳಗಿಸಿ ಕಾರ್ಯಕ್ರಮ ಉದ್ಘಾಟಿಸಿದರು. ಚಿತ್ರದಲ್ಲಿ ನಾಟ್ಯಾಚಾರ್ಯ. ಯು. ಎಸ್. ಕೃಷ್ಣರಾವ್, ವಾಣೀ ಗಣಪತಿ, ಸಿ. ವಿ. ಎಲ್. ಶಾಸ್ತ್ರಿ.



# ಮೈತ್ರಿ

– ಕೈಲಾ ಭಬ್ಬಿ

ಹದಿನೈದು ವರ್ಷಗಳ ನಂತರದ ಅಲ್ಕಾಳ ಅನಿರೀಕ್ಷಿತ ಭೇಟಿ ನನಗೆ ಆನಂದಾಶ್ಚರ್ಯವನ್ನು ತಂದಿತ್ತು. ಅವಳ ಗಂಡನಿಗೆ ನಾನಿದ್ದ ಊರಿಗೇ ವರ್ಗವಾದದ್ದು ಈ ಭೇಟಿಗೆ ಕಾರಣವಾಗಿತ್ತು. ಹಿಂದೆ ರಸಗುಲ್ಲಾದಂತಿದ್ದವಳು ಈಗ ಹಿಂಡಿದ ಕಬ್ಬಿನಂತಾಗಿದ್ದಳು. ಅವಳು ನಗುನಗುತ್ತ ನನ್ನೊಡನೆ ವ್ಯವಹರಿಸಿದ್ದರೂ ಆ ಕೃತಕ ನಗೆಯ ಹಿಂದಿನ ನೋವು ನನಗೆ ದುಃಖವುಂಟುಮಾಡಿತ್ತು.

ಅಲ್ಕಾ ಆಗರ್ಭ ಶ್ರೀಮಂತೆ, ಚೆಲುವೆ, ಬುದ್ಧಿವಂತೆ. ನಾನಾದರೊ ಬಡವಿ. ಹೇಳಿಕೊಳ್ಳುವ ರೂಪವತಿಯೂ ಅಲ್ಲ. ನಾವಿಬ್ಬರೂ, ಮೊದಲ ತರಗತಿಯಿಂದ ಸಹಪಾಠಿಗಳು. ಪರಮ ಸ್ನೇಹಿತೆಯರು. ಜಾತಿ, ಅಂತಸ್ತು, ಐಶ್ವರ್ಯ, ರೂಪಗಳು ನಮ್ಮ ಸ್ನೇಹಕ್ಕೆ ಅಡ್ಡಗೋಡೆಗಳಾಗಿರಲಿಲ್ಲ. ಆರ್ಥಿಕ ಸಮಸ್ಯೆಯಿಂದಾಗಿ ನನ್ನ ಓದು ಪಿ.ಯು.ಸಿ.ಗೇ ನಿಂತಾಗ ಅಲ್ಕಾ ನನ್ನ ಫೀ, ಪುಸ್ತಕಗಳ ಖರ್ಚನ್ನು ವಹಿಸಿಕೊಂಡು ನನ್ನ ಓದಿಗೆ ಪ್ರೇರಣೆ- ಪ್ರೋತ್ಸಾಹಗಳನ್ನು ನೀಡಿದ್ದಳು. ತನ್ನ ಬೆಲೆಬಾಳುವ ಪುಸ್ತಕಗಳನ್ನು ನನಗೆ ಓದಲಿತ್ತು ನನ್ನ ಪ್ರಗತಿಗೆ ಸಹಾಯವಾಗಿದ್ದಳು. ಅವಳ ಈ ಔದಾರ್ಯ ಹಾಗೂ ಉದಾತ್ತತೆಗಳಿಗೆ ನಾನು ಸಂಕೋಚಪಟ್ಟುಕೊಂಡಾಗಲೆಲ್ಲ "ನಾನೇನು ಬಿಟ್ಟಿ ಕೊಟ್ಟಿಲ್ಲ. ಮುಂದೊಂದು ದಿನ ಬಡ್ಡಿ ಸಮೇತ ವಸೂಲಿ ಮಾಡುವೆ" ಎಂದು ವಿಷಯವನ್ನು ತಿಳಿಯಾಗಿಸುತ್ತಿದ್ದಳು.

ನಾವು ಸ್ನಾತಕೋತ್ತರ ಪ್ರಥಮ ವರ್ಷದಲ್ಲಿದ್ದಾಗ ಎಮ್.ಎಸ್ಸಿ ಪ್ರಥಮ ಓದುತ್ತಿದ್ದ ರಮಣನೊಂದಿಗೆ ಅಲ್ಕಾಳ ಸ್ನೇಹ ಬೆಳೆದು ಪ್ರಣಯಕ್ಕೆ ತಿರುಗಿತು. ಆದರೆ ಜಾತಿ-ಅಂತಸ್ತಿನ ಕಾರಣದಿಂದಾಗಿ ಎರಡೂ ಕುಟುಂಬದ ಹಿರಿಯರಿಂದ ಈ ಮದುವೆಗೆ ತೀರ ಪ್ರತಿಭಟನೆ ನಡೆಯಿತು. ಆದರೆ ಅಲ್ಕಾ-ರಮಣರು ಪ್ರೇಮದ ಹುಚ್ಚು ಹೊಳೆಯಲ್ಲಿ ಎಷ್ಟು ಕೊಚ್ಚಿಕೊಂಡು ಹೋಗಿದ್ದರೆಂದರೆ, ಭವಿಷ್ಯ ಜೀವನದ ಬಗ್ಗೆ ಯೋಚಿಸುವಷ್ಟು ವಿವೇಕ ಅವರಲ್ಲಿರಲಿಲ್ಲ. ಇಬ್ಬರೂ ಓಡಿ ಹೋಗಿ ದೂರದ ಊರಿನಲ್ಲಿ ಮದುವೆಯಾದರು. ಎರಡೂ ಪರಿವಾರದವರಿಂದ ತಿರಸ್ಕೃತರಾದ ಅವರ ವೈವಾಹಿಕ ಜೀವನ ಸುಗಮವಾಗಿರಲಿಲ್ಲ. ಆರ್ಥಿಕ ಸಮಸ್ಯೆಯಿಂದಾಗಿ ಓದನ್ನು ಮುಂದುವರಿಸಲಾರದೆ, ಯೋಗ್ಯ ನೌಕರಿಯನ್ನೂ ಪಡೆಯಲಾರದೆ ಇಬ್ಬರೂ ತುಂಬ ಒದ್ದಾಡಬೇಕಾಯಿತು. ಸಾಲದ್ದಕ್ಕೆ ಮಕ್ಕಳ ಆಗಮನ. ಮದುವೆಯ ನಂತರದ ಒಂದೆರಡು ವರ್ಷಗಳವರೆಗೆ ಅವಳು ನನ್ನೊಡನೆ ಪತ್ರಸಂಪರ್ಕವಿಟ್ಟುಕೊಂಡಿದ್ದು, ಮುಂದೆ ಅದನ್ನೂ ನಿಲ್ಲಿಸಿಬಿಟ್ಟ ಅವಳು ತವರಿಗೆ ಎಂದೂ ಬರಲೇ ಇಲ್ಲ.

ಅನೇಕ ತೊಂದರೆಗಳ ಮಧ್ಯೆಯೂ ನಾನು ಉಳಿದ ಒಂದು ವರ್ಷದ ವಿದ್ಯಾಭ್ಯಾಸ ಮುಗಿಸಿ ಎಮ್. ಎ. ಪದವಿ ಸಂಪಾದಿಸಿದೆ. ಮದುವೆಯಾಗಿ ಗಂಡನ ಊರು ಸೇರಿ ನೌಕರಿಗೆ ತೊಡಗಿದೆ. ಕಳೆದ ಹನ್ನೆರಡು ವರ್ಷಗಳಿಂದ ನಾನು ಸಂಪಾದಿಸುತ್ತಿದ್ದರೂ. ಅತ್ತೆಯ ಮನೆಯ ದೊಡ್ಡ ಸಂಸಾರಕ್ಕೆ ಹೆಗಲು ಕೊಟ್ಟು ದುಡಿಯುತ್ತಿದ್ದರಿಂದ ಹಣದ ಉಳಿತಾಯ ಮಾತ್ರ ಹೆಚ್ಚೇನೂ ಆಗಿಲ್ಲ. ಮಕ್ಕಳಿಗೆ ದೂರದ ಪ್ರವಾಸಕ್ಕೆ ಹೋಗುವ ಆಸೆ. ಅತ್ತೆ, ಮಾವಂದಿರಿಗೆ ಬಹುದಿನಗಳಿಂದ ರಾಮೇಶ್ವರ ನೋಡುವ ಹಂಬಲ. ಹೀಗಾಗಿ ಈ ಬೇಸಿಗೆಯಲ್ಲಿ ದಕ್ಷಿಣ ಭಾರತದ ಪ್ರವಾಸ ಕೈಕೊಂಡು ಎಲ್ಲರ ಮನದಾಸೆಯನ್ನು ಒಮ್ಮೆಯಾದರೂ ಪೂರೈಸುವ ಚಪಲ ನನಗೆ.

ಈಗ ಅಲ್ಕಾಳ ಭೇಟಿಯಾಗಿ ಆರು ತಿಂಗಳು ಕಳೆದಿರಬಹುದು. ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದ ಅವಳು ಇಂದು ಕೆಳ ಮಧ್ಯಮ ವರ್ಗದ ಜನರ ಜೀವನ ಸಾಗಿಸುತ್ತಿದ್ದಾಳೆ. ನಮ್ಮಿಬ್ಬರ ಸಂಪಾದನೆಯ ಕಾರಣದಿಂದಾಗಿ ಅವಳಿಗಿಂತ ನಾವು ಸುಸ್ಥಿತಿಯಲ್ಲಿದ್ದೇವೆ. ಹೀಗಾಗಿ ಅವಳು ನನ್ನೊಡನೆ ಬೆರೆಯಲು ಸಂಕೋಚಪಡುತ್ತಾಳೆ. ಅನುಕೂಲವಾದಾಗ ನಾನೇ ಅವಳ ಮನೆಗೆ ಹೋಗುತ್ತಿರುತ್ತೇನೆ.

ಹೋದ ವಾರ ಬೇಸಿಗೆಯ ಸುಡುಬಿಸಿಲಲ್ಲಿ ಅಲ್ಕಾ ನಮ್ಮ ಮನೆಗೆ ಬಂದಾಗ ತೀರ ಅಧೀರಳಾದದ್ದನ್ನು ಕಂಡೆ. ರಮಣನಿಗೆ ಏನೋ ಕಾಯಿಲೆ. ಸಾಧ್ಯವಿದ್ದಷ್ಟು ಬೇಗ ಆಪರೇಶನ್ ಆಗಬೇಕಂತೆ. ಅದಕ್ಕೆ ಹಣ ಹೊಂದಿಸಲು ಹೆಣಗುತ್ತಿದ್ದಾಳೆ. ನನ್ನಿಂದ ಹತ್ತು ಸಾವಿರ ರೂಪಾಯಿಯ ನೆರವು ಕೇಳಲು ಬಂದಿದ್ದಳು. ಕಳೆದ ಎಷ್ಟೋ ತಿಂಗಳಿಂದ ಹತ್ತು-ಹನ್ನೊಂದು ಸಾವಿರ ರೂಪಾಯಿಗಳನ್ನು ನಾವು ದಕ್ಷಿಣ ಭಾರತದ ಪ್ರವಾಸಕ್ಕಾಗಿ ಕಷ್ಟಪಟ್ಟು ಉಳಿಸಿದ್ದೆವು. ಅವಳಿಗೆ ಸಹಾಯ ಮಾಡಬೇಕೆಂಬ ಉತ್ಕಟೇಚ್ಛೆ ಇದ್ದರೂ ಹಣಕಾಸಿನ ವಿಷಯದಲ್ಲಿ ನಾನು ಅಸ್ವತಂತ್ರಳೂ, ಅಸಹಾಯಕಳೂ ಆಗಿದ್ದೆ. ನನ್ನ ಪತಿಯಂತೂ ಹಾಗೆಲ್ಲ ಹಣ ಬಿಚ್ಚುವವರೇ ಅಲ್ಲ. ಅನುಮಾನಿಸುತ್ತ ನಾನು ಗೆಳತಿಗಾಗಿ ಐದು ಸಾವಿರ ಸಾಲ ಕೊಡಿರೆಂದು ಕೇಳಿದಾಗ ಏನೆಲ್ಲ ನೆಪ ಹೇಳಿ ನಿರಾಕರಿಸಬಿಟ್ಟಿದ್ದರು. ತುಂಬ ಆಸೆ ಹೊತ್ತು ಬಂದ ಅವಳನ್ನು ನಿರಾಶಳನ್ನಾಗಿ ಕಳಿಸಲು ನನಗೆ ತೀರ ಮುಜುಗರವಾಯಿತು. ನನ್ನನ್ನು ಇಂದಿನ ಸುಸ್ಥಿತಿಗೆ ತರಲು ತನು-ಮನ-ಧನಗಳಿಂದ ಶ್ರಮಿಸಿದ ಅಲ್ಕಾಳ ಎದುರು ನಾನು ತೀರ ಕುಬ್ಜಳಾಗಿ ಕಂಡೆ.

ಬೇಸಿಗೆಯ ರಜೆ ಪ್ರಾರಂಭವಾಯಿತು. ಪ್ರವಾಸದ ಸಿದ್ಧತೆ ನಡೆಯಿತು. ತಿಕೀಟಿಗಾಗಿ ಹಾಗೂ ಮೇಲಿನ ಖರ್ಚಿಗಾಗಿ ಹಣ ತೆಗೆಯಿಸಬೇಕಾಗಿತ್ತು. ಹತ್ತು ಸಾವಿರ ರೂಪಾಯಿಯ ಚೆಕ್‌ನೊಂದಿಗೆ ಬ್ಯಾಂಕಿಗೆ ಹೋಗಿ ಕ್ಯಾಶ್ ಮಾಡಿಸಿದೆ. ಅಲ್ಕಾ ಅಂದು ಅಲ್ಲಿಯೇ ಇದ್ದಳು. ನಾನು ಹಣವನ್ನು ಬ್ಯಾಗಿಗೆ ಸೇರಿಸಿ ಹೊರನಡೆದೆ. ಮುಂದಿನ ಕೆಲವೇ ಕ್ಷಣಗಳಲ್ಲಿ ಬ್ಯಾಗ್ ಸಮೇತ ನನ್ನ ಹಣ ಅಪಹರಿಸಲ್ಪಟ್ಟಿತ್ತು. "ಕಳ್ಳ-ಕಳ್ಳ" ಎಂದು ಬೊಬ್ಬೆ ಹಾಕಿದೆ. ಜನ ಜಾತ್ರೆ ಸೇರಿತು. ಯಾವನೋ ಒಬ್ಬ "ನಿಮ್ಮ ನೂರರ ನೋಟೊಂದು ಕೆಳಗೆ ಬಿದ್ದಿದೆ" ಎಂದು ನನ್ನ ಗಮನವನ್ನು ಬೇರೆಡೆ ಸೆಳೆದು ನನ್ನ ಬ್ಯಾಗನ್ನು ಅಪಹರಿಸಿದ ಬಗ್ಗೆ ದೂರು ಕೊಟ್ಟೆ. ನನ್ನ ಅಲಕ್ಷ್ಯಕ್ಕಾಗಿ ಪತಿಯಿಂದ ಸಹಸ್ರನಾಮಾವಳಿ ಕೇಳಬೇಕಾಯಿತು. ಬಹುದಿನಗಳಿಂದ ಅನೇಕ ಕನಸುಗಳನ್ನು ಹೆಣೆದುಕೊಂಡು ಕುಳಿತ ಮಕ್ಕಳು, ಅತ್ತೆ ಮಾವಂದಿರನ್ನು ನಿರಾಶೆಯ ಕೂಪಕ್ಕೆ ತಳ್ಳಬೇಕಾಯಿತು. ಆದಾಗ್ಯೂ ನನ್ನ ಮನಸ್ಸಿಗೆ ಅಲೌಕಿಕ ಆನಂದ, ನೆಮ್ಮದಿ ದೊರೆಯಿತು. ನಾನು ಆಡಿದ ಹಣದ ಅಪಹರಣದ ನಾಟಕ ಯಶಸ್ವಿಯಾಗಿತ್ತು. ನನ್ನ ಕೈಯಾರೆ ಅಲ್ಕಾಳ ಕೈಸೇರಿದ ಹಣದ ಚೀಲ ರಮಣನ ಶಸ್ತ್ರಚಿಕಿತ್ಸೆಗೆ ಉಪಯೋಗವಾಗಿ, ಅವಳ ಸೌಭಾಗ್ಯ ಉಳಿಸಿತ್ತು. 'ಎ ಫ್ರೆಂಡ್ ಇನ್ ನೀಡ್ ಈಜ್ ಎ ಫ್ರೆಂಡ್ ಇನ್‌ಡೀಡ್' ಎಂಬ ಇಂಗ್ಲೀಷ್ ಗಾದೆಯನ್ನು ನೆನೆಯುತ್ತ ನನ್ನ ಜೀವನದ ಸಾರ್ಥಕ್ಯವನ್ನು ಕಂಡುಕೊಂಡೆ. ●

# ಸಂಮೋಹಿನಿ ಚಿಕಿತ್ಸೆ — ಡಾ॥ ಉಷಾ ರಾವ್

## ಸೈಕೊಸೋಮಾಟಿಕ್ ರೋಗಿಗಳಿಗೆ ವರದಾನ

ಮೋಹನ್‌ಚಂದ್ ಮುಂಬೈಯ ಒಬ್ಬ ಕೋಟ್ಯಾಧಿಪತಿ, ಎರಡು ಕಾರ್ಖಾನೆಗಳ ಮಾಲೀಕ. ಆತನ ಉದ್ಯಮದ ಉತ್ಪನ್ನಗಳಿಗೆ ಮಾರುಕಟ್ಟೆಯಲ್ಲಿ ಭಾರೀ ಬೇಡಿಕೆ. ಒಳ್ಳೆಯ ಆರೋಗ್ಯ, ಹಣ, ಅಂತಸ್ತು, ಜವಾನರು, ಸುಂದರ ಹಾಗೂ ಸುಶಿಕ್ಷಿತ ಪತ್ನಿ, ಇಬ್ಬರು ವಿಧೇಯರಾದ ಮಕ್ಕಳು, ಏರ್‌ಕಂಡಿಷನ್ಡ್ ಕಾರು, ಬಂಗಲೆ ಹೀಗೆ ಜೀವನದಲ್ಲಿ ಬೇಕಾದ ಎಲ್ಲವೂ ಆತನಿಗಿದ್ದುವು. ಬೇರಿನ್ನೇನು ಬೇಕು ?

ಆದರೆ ನಮ್ಮ ಕಥಾನಾಯಕನ ಜೀವನದಲ್ಲಿ ಅದೊಂದು. ದಿನ ಒಂದು ವಿಚಿತ್ರ ನಡೆಯಿತು. ಅಂದು ಆತ ತನ್ನ ಪತ್ನಿಯೊಂದಿಗೆ ಒಂದು ಒಳ್ಳೆಯ ಸಿನಿಮಾ ನೋಡಲು ಹೋಗಿದ್ದ–ಅದೇ ಅವನ ಮುಂದಿನ ತೊಂದರೆಗಳಿಗೆ ಕಾರಣವಾಯಿತು. ಅದು ಕ್ಯಾನ್ಸರ್ ರೋಗಿಯೊಬ್ಬನ ಜೀವನ ಕುರಿತ ಚಿತ್ರ. ಮೊದಲಿನಿಂದ ಚಿಕಿತ್ಸೆ ಪಡೆದರೂ ಆತ ಸಾಯುತ್ತಾನೆ. ಈ ಸಿನಿಮಾ ಮೋಹನ್‌ಚಂದ್‌ನ ಮನಸ್ಸನ್ನು ತುಂಬಾ ಕಲಕಿತು, ಆ ಬಗೆಗೆ ಯೋಚಿಸಿದಷ್ಟೂ ಆತನ ಚಡಪಡಿಕೆ, ಜಾಸ್ತಿಯಾಗುತ್ತಿತ್ತು. ಏಕೆಂದರೆ ತಾನೂ ಒಬ್ಬ ಕ್ಯಾನ್ಸರ್ ರೋಗಿ ಎಂಬ ಭಾವನೆ ಅವನಲ್ಲಿ ಬೆಳೆಯಲಾರಂಭಿಸಿತು. ಕೇವಲ ಮೂರೂವರೆ ತಿಂಗಳುಗಳಲ್ಲಿ ಆತನ ತೂಕ ಎರಡು ಪೌಂಡ್‌ಗಳಷ್ಟು ಕಡಿಮೆಯಾಯಿತು. ಇದು ಪರಿಸ್ಥಿತಿಯನ್ನು ಮತ್ತಷ್ಟು ಹದಗೆಡಿಸಿತು. ಆತನ ಚಿಂತೆ ಹೆಚ್ಚಾದಂತೆ ತಾನೊಬ್ಬ ಕ್ಯಾನ್ಸರ್ ರೋಗಿ ಎಂಬ ಭಾವನೆ ಆತನಲ್ಲಿ ಬಲಿಯಿತು.

ಅನಂತರ ಆತ ಅನೇಕ ಮಂದಿ ವೈದ್ಯ ಸ್ಪೆಷಲಿಸ್ಟ್‌ಗಳ ಬಳಿ ಹೋದ. ಕಡೆಗೆ ಮುಂಬೈಯ ಸುಪ್ರಸಿದ್ಧ ಕ್ಯಾನ್ಸರ್ ಆಸ್ಪತ್ರೆ ಟಾಟಾ ಹಾಸ್ಪಿಟಲ್‌ಗೂ ಹೋಗಿ ಬಂದ. ಎಲ್ಲ ಪರೀಕ್ಷಾ ವರದಿಗಳೂ ಆತನಲ್ಲಿ ಕ್ಯಾನ್ಸರ್‌ನ ಚಿಹ್ನೆಯ ಲವಲೇಶವೂ ಇಲ್ಲ ಎಂದು ಖಚಿತಪಡಿಸಿದವು. ಆದರೆ ಆತನಿಗೆ ನಂಬಿಕೆ ಬರಲಿಲ್ಲ. ಅನಂತರ ಮೋಹನ್‌ಚಂದ್ ಒಬ್ಬ ಸೈಕ್ರಿಯಾಟ್ರಿಸ್ಟ್ (ಮನೋವ್ಯಾಧಿ ಚಿಕಿತ್ಸಕ)ರ ಬಳಿ ಹೋದ. ಇಲ್ಲಿ ಕೂಡ ಆತನಲ್ಲಿ ಯಾವ ದೋಷವೂ ಇಲ್ಲ ಎಂದು ವರದಿ ತಿಳಿಸಿತು. ಆದರೂ ಆತನ ಭಾವನೆ ಬದಲಾಗಲಿಲ್ಲ. ಆತನ ನರಗಳು ಸ್ಥಿಮಿತ ಕಳೆದುಕೊಂಡವು. ಆತನಿಗೆ ಸರಿಯಾಗಿ ನಿದ್ರೆ ಬರುತ್ತಿರಲಿಲ್ಲ. ಆತನ ಚಡಪಡಿಕೆ ಹೆಚ್ಚುತ್ತ ಹೋಯಿತು. ಕಡೆಗೆ ತನ್ನ ಬಿಸಿನೆಸ್ ಬಗೆಗೆ ಗಮನ ಕೇಂದ್ರೀಕರಿಸಲು ಸಾಧ್ಯವಿಲ್ಲದಂತಾಯಿತು. ಹಸಿವು, ರುಚಿ ಎರಡೂ ಇಲ್ಲದಂತಾಯಿತು.

ಕಟ್ಟ ಕಡೆಯ ಪ್ರಯತ್ನವಾಗಿ ಮೋಹನ್‌ಚಂದ್‌ನನ್ನು ನನ್ನ ಹತ್ತಿರ ಕರೆತರಲಾಯಿತು. ಆತನ ಮುಖ ಬಿಳಿಚಿಕೊಂಡಿತ್ತು, ಧ್ವನಿ ನಡುಗುತ್ತಿತ್ತು, ಮನಸ್ಸು ಅಸ್ಥಿರವಾಗಿತ್ತು.

ಮೋಹನ್‌ಚಂದ್ ವ್ಯಾಧಿಯ ಸಂಕ್ಷಿಪ್ತ ಇತಿಹಾಸವನ್ನು ಪಡೆದುಕೊಂಡ ಬಳಿಕ, ಒಂದೊಂದಾಗಿ ಆತನ ಹೆದರಿಕೆಯ ಮೂಲ ಕಾರಣಗಳನ್ನು ನಿವಾರಿಸಲು ನಿರ್ಧರಿಸಿದೆ.

ಮೊದಲಿಗೆ ಮೋಹನ್‌ಚಂದ್‌ಗೆ ಸಂಮೋಹಿನಿ ಬಗೆಗೆ ಹಾಗೂ ಸಂಮೋಹಿನಿ ಚಿಕಿತ್ಸೆ ಬಗೆಗೆ ಸ್ಪಷ್ಟವಾಗಿ ವಿವರಿಸಲಾಯಿತು. ಆತನಿಗೆ ಅತ್ಯಂತ ಉಪಯುಕ್ತವಾಗಿದ್ದ ಚಿಕಿತ್ಸಾ ವಿಧಾನವೆಂದರೆ ಡಿಸೆನ್ಸಿಟೈಸೇಷನ್ ತಂತ್ರ. ಆದರೆ ಈ ತಂತ್ರವನ್ನು ಬಳಸುವುದಕ್ಕೆ ಮುಂಚೆ ಮೋಹನ್‌ಚಂದ್‌ಗೆ ಕೆಲವು ಪ್ರಾಥಮಿಕ ರಿಲ್ಯಾಕ್ಸೇಷನ್ ತಂತ್ರಗಳನ್ನು ಬೋಧಿಸಿದೆ. [ಈ ಹಿಂದಿನ ಲೇಖನಗಳಲ್ಲಿ ದೈಹಿಕ ಹಾಗೂ ಮಾನಸಿಕ ರಿಲ್ಯಾಕ್ಸೇಷನ್ ತಂತ್ರಗಳನ್ನು ವಿವರವಾಗಿ ಚರ್ಚಿಸಲಾಗಿದೆ] ಅನಂತರ ಸಂಮೋಹಿನಿ ನಂತರದ ಸೂಚನೆಯ ಮೂಲಕ ಡೀಸೆನ್ಸಿಟೈಸೇಷನ್ ತಂತ್ರವನ್ನು ಅನ್ವಯಿಸಲಾಯಿತು. ಇಂಥ 27 ಅಭ್ಯಾಸಾಧಿವೇಶನಗಳ ನಂತರ (ನಿಯತವಾಗಿ) ಮೋಹನ್‌ಚಂದ್ ಸ್ಥಿತಿ ಸುಧಾರಿಸಿತು. ವಶ್ಯಸುಪ್ತಿ (ಟ್ರಾನ್ಸ್) ಸ್ಥಿತಿಯಲ್ಲಿದ್ದಾಗ ಆತನೊಂದಿಗೆ ಎಲ್ಲ ವಿಷಯಗಳ ಬಗೆಗೂ ಮಾತಾಡಲಾಯಿತು. ಈ ಹಂತದಲ್ಲಿ ಜಾಗೃತ ಹಾಗೂ ಸುಪ್ತಾವಸ್ಥೆಯ ಮನಸ್ಸಿನ ನಡುವಣ ಅಡ್ಡಗೋಡೆಯನ್ನು ಕೆಡಹುವ ಪ್ರಯತ್ನ ಮಾಡಲಾಯಿತು. ಇದು ಸಾಧಿತವಾದಾಗ ಮೋಹನ್‌ಚಂದ್ ಪರಿಣಾಮಕಾರೀ ಹಾಗೂ ಶಾಶ್ವತವಾಗಿ ಗುಣಹೊಂದುವಂಥ ಸಂಮೋಹಿನಿ ಸೂಚನೆಗಳಿಗೆ ಪೂರ್ತಿ ಸಿದ್ಧವಾಗಿರುವನೆಂದು ಕಂಡುಕೊಳ್ಳಲಾಯಿತು. ಅಂತೆಯೇ ಆತ ಸಂಪೂರ್ಣವಾಗಿ ಗುಣಹೊಂದಿದ.

ಲೈಂಗಿಕ ತೊಂದರೆಗಳನ್ನು ಎದುರಿಸುವಲ್ಲಿಯೂ ಸಂಮೋಹಿನಿ ಚಿಕಿತ್ಸೆ ಪರಿಣಾಮಕಾರಿಯಾದುದು. ಅವುಗಳಲ್ಲಿ ಹೆಚ್ಚಿನವು ಸೈಕೋಸೊಮ್ಯಾಟಿಕ್ ಮೂಲದವು. ಅಪೆಂಡಿಸೈಟಿಸಿಸ್ ಶಸ್ತ್ರಚಿಕಿತ್ಸೆಗೊಳಗಾದ ಸುಲ್ತಾನಾಳ ಪ್ರಕರಣವನ್ನು ಇಲ್ಲಿ ವಿವರಿಸುತ್ತಿದ್ದೇನೆ. ಶಸ್ತ್ರಚಿಕಿತ್ಸೆಯಾದ ಆರು ತಿಂಗಳಗಳೊಳಗೆ ಸುಲ್ತಾನಾ ಜೀವನದಲ್ಲಿ ಆಸಕ್ತಿಯನ್ನು ಕಳೆದುಕೊಂಡು ಮಾನಸಿಕವಾಗಿ ಪೂರ್ತಿ ಕುಸಿದಿದ್ದಳು. ಆಕೆಗೆ ಇನ್ನು 32 ವರ್ಷ ವಯಸ್ಸು. ಹಲವಾರು ವೈದ್ಯರುಗಳ ಬಳಿ ಹೋದ ನಂತರ ಸುಲ್ತಾನಾ ನನ್ನಲ್ಲಿಗೆ ಬಂದಳು. ಆಕೆಯ ಕೇಸ್ ಹಿಸ್ಟರಿ ಪಡೆಯುವ ಮೂಲಕ ಆಕೆಯಲ್ಲಿ "ಇಂಥ ಶಸ್ತ್ರಚಿಕಿತ್ಸೆಗಳ ಬಳಿಕ ಸ್ತ್ರೀಯರು ಸಾಮಾನ್ಯವಾಗಿ ಲೈಂಗಿಕ ಕ್ರಿಯೆಗೆ ಅನರ್ಹರಾಗುತ್ತಾರೆ" ಎಂಬ ತಪ್ಪು ಭಾವನೆ ಬೇರೂರಿರುವುದು ತಿಳಿದು ಬಂತು. ಅಂತೆಯೇ ಆಕೆಯಲ್ಲಿ ಈಗ ಏನು ಅಪೂರ್ಣ ಸ್ತ್ರೀಯಾಗಿರುವುದರಿಂದ ತನ್ನ ಪತಿ ತನ್ನಲ್ಲಿ ಆಸಕ್ತಿ ಕಳೆದುಕೊಂಡಿದ್ದಾನೆ ಎಂಬ ಭಾವನೆ ಬೆಳೆಯಿತು. ಸಂಮೋಹಿನಿ ಚಿಕಿತ್ಸಾ ತಂತ್ರದ ಮೂಲಕ ಸುಲ್ತಾನಾಳಲ್ಲಿ ಆಳವಾಗಿ ಬೇರೂರಿದ್ದ ಈ ತಪ್ಪು ಭಾವನೆಯನ್ನು ತೊಡೆದು ಹಾಕಲಾಯಿತು. ಈಗ ಆಕೆ ಸಂಪೂರ್ಣ ಗುಣಹೊಂದಿದ್ದು, ತನ್ನ ಕುಟುಂಬಕ್ಕೆ ಹೊಸ ಸದಸ್ಯನನ್ನು ತರುವ ಹಾದಿಯಲ್ಲಿದ್ದಾಳೆ. **




ಭಾರತದ ಸಂಪೂರ್ಣ ಸಾಕ್ಷರ ರಾಜ್ಯವೆಂದು ಹೆಸರಾದ ಕೇರಳ ಈಗ "ಪುತ್ರಕಾಮೇಷ್ಟಿ" ಯಾಗಕ್ಕೆ ಸಜ್ಜಾಗುತ್ತಿದೆ. 5,000 ವರ್ಷಗಳ ನಂತರ ನಡೆಯಲಿರುವ (ಮೇ 2 ರಂದು) ಈ ಯಾಗದಲ್ಲಿ ದೇಶ-ವಿದೇಶಗಳ ಗಂಡು ಸಂತಾನ ವಿಲ್ಲದ ಸಹಸ್ರಾರು ದಂಪತಿಗಳು ಭಾಗವಹಿಸಲಿದ್ದು, ಇದೊಂದು ಅಂತರರಾಷ್ಟ್ರೀಯ ಪುತ್ರಕಾಮೇಷ್ಟಿ ಯಾಗವಾಗಲಿದೆ.

ಈ ಯಾಗಕ್ಕೆ 75 ಲಕ್ಷ ರೂಪಾಯಿ ವೆಚ್ಚ ವಾಗಲಿದೆಯೆಂದು ಅಂದಾಜು ಹಾಕಿದ್ದು, ಭಾರಿ ಪ್ರಮಾಣದಲ್ಲಿ ಖಾದ್ಯವಸ್ತುಗಳನ್ನು ಜೊತೆಗೆ 70 ಕಿಲೋ ತುಪ್ಪವನ್ನು ಯಜ್ಞಕುಂಡ ನುಂಗಲಿದೆ.

ಆಹಾರಾಭಾವದಿಂದ ದೇಶವೆಲ್ಲ ತತ್ತರಿಸುತ್ತಿದ್ದು, ಅಗತ್ಯ ವಸ್ತುಗಳ ಬೆಲೆ ಮುಗಿಲಿಗೇರಿ, ಅನುದಿನದ ಜೀವನವೇ ಅಸಹನೀಯವಾಗಿರುವ ಈ ದಿನಗಳಲ್ಲಿ, ಅಂಧ ಶ್ರದ್ಧೆಗೆ ಇಂಬುಗೊಟ್ಟು ಹಲವರ ಹಸಿವು ಹಿಂಗಿಸಬಹುದಾದ ಖಾದ್ಯವಸ್ತುಗಳನ್ನು ಅಗ್ನಿಗೆ ಆಹುತಿ ಮಾಡುವುದೆಂದರೆ ಅಮಾಯಕರ ಶೋಷಣೆ ಮಾಡಿದಂತೆಯೇ ಸರಿ.

ಹೆತ್ತವರು ತೀರಿದಾಗ ಬಾಯಲ್ಲಿ **ಗಂಗಾಜಲ** ಬಿಡಲು ಹಾಗೂ ಚಿತೆಗೆ ಅಗ್ನಿಸ್ಪರ್ಶ **ಮಾಡಲು** ಮಗನಿಗೆ ಮಾತ್ರ ಅಧಿಕಾರವಿದ್ದು, **ಮಗನಿಂದ** ಅಪರ ಕಾರ್ಯಗಳನ್ನು ಮಾಡಿಸಿಕೊಂಡ **ಮೃತರು** ಪಿತೃಲೋಕ ಸೇರಿ ಮುಕ್ತಿ ಪಡೆಯುತ್ತಾರೆ **ಎಂದು** ಗಂಡು ಸಂತಾನದ ಅಗತ್ಯವನ್ನು, ಯಾಗದ **ಮಹತ್ವ** ವನ್ನು ಸಂಘಟಕರು ವರ್ಣರಂಜಿತವಾಗಿ **ಬಣ್ಣಿಸು** ತ್ತಿದ್ದಾರೆ. ಸತ್ತ ಮೇಲೆ ಮುಕ್ತಿ ಯಾರಿಗೆ **ಬೇಡ ?** ಹಾಗಾದರೆ ಖ್ಯಾತ ವಿಜ್ಞಾನಿ ದಿವಂಗತ **ವಿಕ್ರಮ್** ಸಾರಾಭಾಯಿ ಅವರ ಆತ್ಮ ಮುಕ್ತಿ ಕಾಣದೆ ಅತೃಪ್ತವಾಗಿ ಗೊತ್ತುಗುರಿಯಿಲ್ಲದೆ ಅಂತರಿಕ್ಷದಲ್ಲಿ ಅಲೆಯುತ್ತಿದೆಯೆ ? ಏಕೆಂದರೆ ಅವರ ಚಿತೆಗೆ ಅಗ್ನಿಸ್ಪರ್ಶ ಮಾಡಿದ್ದು ಅವರ ಪುತ್ರಿ ಖ್ಯಾತ ನರ್ತಕಿ-ಕಲಾವಿದೆ ಮಲ್ಲಿಕಾ ಸಾರಾಭಾಯಿ.

ತಂದೆ-ತಾಯಿಗಳಿಗೆ ವೃದ್ಧಾಪ್ಯದಲ್ಲಿ ಗಂಡು ಮಕ್ಕಳೇ ದಿಕ್ಕು ಎಂಬ ಇನ್ನೊಂದು ಕಾಲ್ಪನಿಕ ಸತ್ಯದತ್ತ ಯಾಗದ ಸಂಘಟಕರು ಜನರ ಗಮನ ಸೆಳೆಯುತ್ತಿದ್ದಾರೆ. ಇದು ಅರ್ಧಸತ್ಯ ಮಾತ್ರವಲ್ಲ, ಆರೋಗ್ಯದ ಕುರಿತು ವಹಿಸಿದ ವಿಶೇಷ ಕಾಳಜಿಯಿಂದಾಗಿ ಮರಣಸಂಖ್ಯೆ ಕಡಿಮೆಯಾಗಿ ವೃದ್ಧರ **ಸಂಖ್ಯೆ** ಹೆಚ್ಚಾಗಿರುವ ಕೇರಳದಲ್ಲಿ ಮಹಿಳೆಯರೇ ವೃದ್ಧರಿಗೆ ಆಸರೆ ಆಗಿರುವ ವಸ್ತು ಸ್ಥಿತಿಯನ್ನು ತಿರುಚುವ ಪ್ರಯತ್ನವಾಗಿದೆ.

ಸಂತತಿಯಿಲ್ಲದೆ ಕೊರಗುತ್ತಿದ್ದ ದಶರಥ ಮಹಾರಾಜ, ಗುರು ವಶಿಷ್ಠರ ಸಲಹೆಯಂತೆ ಪುತ್ರಕಾಮೇಷ್ಟಿ ಯಾಗ ನಡೆಸಿ ಲೋಕ ವಿಖ್ಯಾತನಾದ ಶ್ರೀರಾಮನನ್ನು (ಜೊತೆಗೆ ಇನ್ನೂ ಮೂವರು) ಮಗನಾಗಿ ಪಡೆದ ಪೌರಾಣಿಕ ಸತ್ಯದ ಕುರಿತೂ ಹೇಳಲಾಗುತ್ತಿದೆ. ಶ್ರೀರಾಮನಂತಹ ಮಗ ಯಾರಿಗೆ ಬೇಡ? ಈಗಾಗಲೇ 600 ಕ್ಕೂ ಮೇಲ್ಪಟ್ಟು ದಂಪತಿಗಳು ಯಾಗಕ್ಕಾಗಿ ತಮ್ಮ ಹೆಸರನ್ನು ದಾಖಲು ಪಡಿಸಿದ್ದಾರೆ. ದೇಶದಲ್ಲಿ ಗಂಡು ಸಂತಾನ ವಿಲ್ಲದ 50 ಲಕ್ಷ ದಂಪತಿಗಳಿರುವರೆಂದು ಹೇಳುವ ಸಂಘಟಕರು ಈ ಯಾಗ ಅವರಿಗೆಲ್ಲ ಒಂದು ಆಶಾಕಿರಣವಾಗಿದೆ ಎಂದು ನುಡಿಯುತ್ತಾರೆ. ಅವರೆಲ್ಲರೂ 'ಭಾಗವಹಿಸಿದಲ್ಲಿ ಸಂಘಟಕರು ಹೇಳುವಂತೆ ಮುಂದಿನ ವರ್ಷ 50 ಲಕ್ಷ ರಾಮರು ಹುಟ್ಟುವುದು ಗ್ಯಾರಂಟಿ.

ಪ್ರತಿಯೊಂದಕ್ಕೂ ವಿದೇಶಿಯರ ಸಮ್ಮತಿಯನ್ನು ಬಯಸುವ ಸನ್ಮತಿಯನ್ನು ಬೆಳೆಸಿಕೊಂಡ ನಮಗೆ ವಿದೇಶಿಯರು ಯಾಗದಲ್ಲಿ ಪಾಲ್ಗೊಳ್ಳದಿದ್ದರೆ ಅದರ ಸಫಲತೆಯ ಬಗ್ಗೆ ಸಂದೇಹವೇಳುತ್ತಿರಲಿಲ್ಲವೆ ? ಹಲವಾರು ಆಸ್ಟ್ರೇಲಿಯನ್ ದಂಪತಿಗಳು ಯಜ್ಞಕರ್ಮದಲ್ಲಿ ಭಾಗವಹಿಸಲು ಮುಂದೆ ಬಂದು ನಮ್ಮ ಪುರಾತನ ಮೌಲ್ಯಗಳಲ್ಲಿ ಅಚಲ ನಂಬಿಕೆ ತೋರಿ, ಭಾರತೀಯರಿಗೆ ಸ್ಫೂರ್ತಿ ನೀಡಿದ್ದಾರೆ. ಇಂತಹ ಫಾರಿನ್ ಅಪ್ರೂವ್ಡ್ ಯಾಗದಲ್ಲಿ ಕನಿಷ್ಠಪಕ್ಷ 2,000 ದಂಪತಿಗಳು ಪಾಲ್ಗೊಳ್ಳುವ ನಿರೀಕ್ಷೆ ಹೊಂದಿರುವ ಸಂಘಟಕರು, ಯಾಗದಲ್ಲಿ ಭಾಗವಹಿಸಿದ ಮಹಿಳೆಯರು ಒಂದು ತಿಂಗಳೊಳಗೆ ಗರ್ಭ ಧರಿಸಿ "ಗಂಡು ಮಗುವಿಗೆ" ಜನ್ಮ ನೀಡುವುದು ಖಚಿತ ಎಂದು ಭರವಸೆ ನೀಡಿದ್ದಾರೆ.

ಕುಟುಂಬ ಯೋಜನೆಯನ್ನು ಯಶಸ್ವಿಯಾಗಿ ಜಾರಿಗೆ ತಂದ ಕೀರ್ತಿ ಕೇರಳಕ್ಕೆ ಸಲ್ಲಬೇಕು. 1986 ರಿಂದ 1988 ರ ನಡುವೆ ಕೇರಳದಲ್ಲಿ ಜನನ ಸಂಖ್ಯೆ 37 ರಿಂದ 22 ಕ್ಕೆ (ಪ್ರತಿ ಸಾವಿರಕ್ಕೆ) ಇಳಿದಿದ್ದು ಒಂದೆಡೆಯಾದರೆ, 1981 ರಿಂದ 1991 ರ ವರೆಗೂ ಪ್ರತಿವರ್ಷ 1.31% ರಷ್ಟು ಮಾತ್ರ ಜನಸಂಖ್ಯೆಯ ಹೆಚ್ಚಳ ಕೇರಳದಲ್ಲಿ ಕುಟುಂಬ ಯೋಜನೆಯ ಯಶಸ್ಸಿಗೆ ಕನ್ನಡಿ ಹಿಡಿದಿದೆ. ಮಹಿಳೆಯರನ್ನು ಸುಶಿಕ್ಷಿತೆಯರನ್ನಾಗಿ ಮಾಡಿದ್ದೇ ಈ ಯಶಸ್ಸಿನ ಮೂಲ ಕಾರಣವೆಂದರೆ ತಪ್ಪಾಗಲಾರದು. ಪುರಾತನ ಮೌಲ್ಯಗಳ ಹೆಸರಿನಲ್ಲಿ ಈ ಯಾಗ ಜನರನ್ನು ದಿಕ್ಕು ತಪ್ಪಿಸಲಿದೆಯೇನೋ ಎಂಬ ಆತಂಕ ಮೂಡಿಸಿದೆ.

ನಮ್ಮ ಸನಾತನ ಧರ್ಮದ ಉತ್ತಮ ಮೌಲ್ಯಗಳ ರಕ್ಷಣೆ ಅಗತ್ಯ ಎಂಬುದು ನಿರ್ವಿವಾದವಾದರೂ, ಪುರಾತನ ಮೌಲ್ಯಗಳ ಪುನರುತ್ಥಾನದ ಹೆಸರಿನಲ್ಲಿ ಜನಸಾಮಾನ್ಯರಲ್ಲಿ ನೆಲೆ ನಿಂತಿರುವ ಗಂಡೇ ಶ್ರೇಷ್ಠವೆಂಬ ಅಕಾರಣ ನಂಬಿಕೆಗೆ ಧಾರ್ಮಿಕ ನೆಲೆಗಟ್ಟು ನೀಡುವುದರ ಔಚಿತ್ಯ ಅರ್ಥವಾಗುತ್ತಿಲ್ಲ. ವ್ಯಕ್ತಿಯೊಬ್ಬ ತನಗೆ ಗಂಡು ಸಂತಾನ ಬೇಕೆಂದು

# ಖೋಟಾ ಬೇಡ: ಸಾಚಾ ತಯಾರಿಸಿ

—ಶಾರದಾ ಆರ್. ಶಾಸ್ತ್ರಿ

ಚಂದ ಕಾಣಸಬೇಕೆಂಬ ಆಕಾಂಕ್ಷೆ ಯಾವ ಹೆಣ್ಣಿಗೆ ತಾನೇ ಇರುವುದಿಲ್ಲ? ಮಾರುಕಟ್ಟೆಯಲ್ಲಿ ಅವಳ ಸೇವೆಗಾಗಿಯೇ ಸಿದ್ಧವಾಗಿರುವ ಪ್ರಸಾಧನ ಸಾಮಗ್ರಿಗಳು ಎಷ್ಟೋ ಸಾವಿರ. ಆದರೆ ಅದರಿಂದ ಬರಬಹುದಾದ ಕೆಡುಕುಗಳನ್ನು ಪರಿಗಣಿಸದೆ ಹಲವು ವ್ಯಾಧಿಗಳಿಗೆ ತುತ್ತಾಗುತ್ತೇವೆ. ನಕಲಿ ಪ್ರಸಾಧನ ಸಾಮಗ್ರಿಗಳು ಹಣ ಸೆಳೆದು, ಗುಣ ಕಳೆಯುವುದರಲ್ಲಿ ಯಶಸ್ವಿಯಾಗುತ್ತಿವೆ. ಕಳೆದ ತಿಂಗಳು ಮಾರುಕಟ್ಟೆಗೆ ಹೊಸದಾಗಿ ಬಂದ ಲೋಷನನ್ನು ಮನೆಗೆ ತಂದಿದ್ದೆ. ಅದನ್ನು ಉಪಯೋಗಿಸಿದ ನಮ್ಮ ಮನೆಯ ಎಲ್ಲರಿಗೂ ಮುಖದಲ್ಲಿ ತುರಿಗಜ್ಜಿ, ಇಸುಬು, ಎಗ್ಜಿಮಾ ಕಾಣಿಸಿಕೊಂಡಿತು. ಚಿಕ್ಕಮಗಳಿಗೆ ಮುಖದ ಚರ್ಮ ಕೆಂಪಗಾಗಿ ಗುಳ್ಳೆಗಳು ಮೂಡಿದುವು. ಇದು ಕಲಬೆರಕೆಯ ಲೋಷನಿನ ಪರಿಣಾಮವೆಂದು ವೈದ್ಯರು ಸ್ಪಷ್ಟವಾಗಿ ಹೇಳಿ, "ಯಾವ ಲೇಪನವಾದರೂ ಚರ್ಮಕ್ಕೆ ಒಂದಲ್ಲ ಒಂದು ವಿಧದಿಂದ ಹಾನಿಕರ. ಇದರ ನಿತ್ಯೋಪಯೋಗದಿಂದ ಚರ್ಮ ಬೇಗನೆ ಸುಕ್ಕುಗಟ್ಟುವುದು" ಎಂದು ತಿಳಿಸಿದರು. ಮುಖಕ್ಕೆ ಲೇಪಿಸಿದ ಕ್ರೀಂ ಚರ್ಮ ರಂಧ್ರವನ್ನು ಪ್ರವೇಶಿಸಲೆತ್ನಿಸಿ, ಅರ್ಧದಲ್ಲೇ ಸಿಲುಕಿಕೊಳ್ಳುತ್ತದೆ. ಆದರಿಂದ ಕುರು, ಮೊಡವೆ ಇತ್ಯಾದಿಗಳುಂಟಾಗುತ್ತವೆ. ಇದನ್ನು ನಿವಾರಿಸಲು ಚರ್ಮವ್ಯಾಧಿ ನಿವಾರಕಗಳನ್ನು ಬಳಸಿದರೆ ಅಪರ ಖಾರದಿಂದ ಬೇರೆ ವ್ಯಾಧಿಗಳು ಉದ್ಭವಿಸುವುದೆಂಬುದು ನಾವು ಕಂಡುಕೊಂಡ ಸತ್ಯ.

ಕೆಂಪು ತುಟಿ ತೊಂಡೆ ಹಣ್ಣಿನಂತೆ ಚೆಲುವಲ್ಲವೆ? ಹಾಗೆ ಕಾಣಿಸಲು ಹಚ್ಚುವ ಲಿಪ್‌ಸ್ಟಿಕ್‌ಗೆ ಈಸಿನ್ ಬಣ್ಣ ಬೆರೆಸುತ್ತಾರೆಂದು ಗೊತ್ತಾಗಿದೆ. ಅದರಿಂದಾಗಿ ತುಟಿಗಳಲ್ಲಿ ಬಿರುಕುಂಟಾಗಿ, ಒಣಗುತ್ತದೆ, ಅಲ್ಲಲ್ಲಿ ಊದಿಕೊಂಡು ಸ್ವಾಭಾವಿಕ ಬಣ್ಣ ಕಳೆದುಕೊಳ್ಳುವುದು. ಬೇಡದ ರೋಮಗಳನ್ನು ತಕ್ಷಣ ಕಿತ್ತು ಹಾಕುವ ಹೇರ್ ರಿಮೂವರ್‌ಗಳಲ್ಲಿ ಬೆರೆಸುವ ವಿಷ ಪದಾರ್ಥಗಳು ಚರ್ಮದ ಸಹಜ ಕಾಂತಿಯನ್ನೇ ಕೆಡಿಸುತ್ತವೆ. ಬೇಸಿಗೆಯಲ್ಲಿ ಮುಖಕ್ಕೆ ಲೇಪಿಸುವ ಕೋಲ್ಡ್ ಕ್ರೀಂ ಬೆವರಿನ ರಂಧ್ರಗಳನ್ನೆ ಮುಚ್ಚಿ ಗುಳ್ಳೆಗಳನ್ನೆಬ್ಬಿಸುತ್ತದೆ.

ಬಿಳಿ ಕೂದಲು ಕಪ್ಪಗಾಗಿ, ಚೆಲುವಾಗಿರಲು ಬಳಸುವ ಹೇರ್ ಡೈಗಳಿಂದ ದುಷ್ಪರಿಣಾಮವೇ ಹೆಚ್ಚು. ಅದರಲ್ಲಿ ಹೈಡ್ರೋಜನ್ ಪೆರಾಕ್ಸೈಡ್, ಕಾಪರ್ ಸಲ್ಫೇಟ್, ಸಿಲ್ವರ್ ನೈಟ್ರೇಟ್‌ಗಳಂತಹ ರಾಸಾಯನಿಕಗಳ ದುರ್ಮಿಶ್ರಣವಿದೆ. ನೀಳವಾದ ತಲೆಗೂದಲಿಗೆ ಸಹಕಾರಿಯಾದ ಹೇರ್ ಟಾನಿಕುಗಳಲ್ಲಿ ಮೊಬೈಲ್ ಆಯಿಲ್‌ನಂತಹ ವಸ್ತುಗಳನ್ನು ಬೆರಕೆ ಮಾಡಿ, ತಲೆಯಲ್ಲಿ ಉಂಗುರಾಕಾರವಾಗಿ ಕೂದಲು ಉದುರುವಂತಹ ಕಾಯಿಲೆಗೆ ಕಾರಣವಾಗಿದೆ. ಸೀಸದ ಅಂಶದಿಂದ ಕೂಡಿದ ಕಾಡಿಗೆ ಕಣ್ಣಿನ ರೋಗಗಳನ್ನು ತಂದರೆ ಅಚ್ಚರಿಯಲ್ಲ. ಆಲ್ಕೋಹಾಲ್, ಗ್ಲಿಸರಿನ್, ಸ್ಯಾಲಿಸಿಲಿಕ್, ಆಮ್ಲ, ಟ್ಯಾನಿಕ್ ಆಮ್ಲಗಳನ್ನು ಕಾಸ್ಮೆಟಿಕ್ಸ್‌ಗಳಲ್ಲಿ ಬೆರೆಸುತ್ತಾರೆ.

ಇಂತಹ ಉತ್ಪಾದನೆಗಳ ಒಂದು ಅಮೇರಿಕನ್ ಸಂಸ್ಥೆ ಕೇವಲ ಜಾಹೀರಾತಿಗಾಗಿ ವರ್ಷದಲ್ಲಿ 135 ಮಿಲಿಯನ್ ಡಾಲರು ಹಣ ವೆಚ್ಚ ಮಾಡುತ್ತದೆಯಂತೆ. ಒಂದು ತಯಾರಿಕೆ ಜನಪ್ರಿಯತೆ ಕಳೆದುಕೊಂಡಾಗ ಅದು ಇನ್ನೊಂದು ಹೆಸರಿನಿಂದ ಮಾರುಕಟ್ಟೆಗೆ ಪ್ರವೇಶಿಸಿ ಹಣ ಮಾಡುತ್ತಿರುವುದು ಇನ್ನೊಂದು ಸೋಜಿಗ. ಯಾವ ಸೌಂದರ್ಯ ಪ್ರಸಾಧನವೇ ಆಗಿರಲಿ, ನಮಗೆ ತೋರಿಸದೆ ಉಪಯೋಗಿಸಬೇಡಿ ಎಂದು ಅಲ್ಲಿನ ವೈದ್ಯರು ಬೊಬ್ಬೆ ಹಾಕುತ್ತಾರೆ. ಇದರಿಂದ ಉಂಟಾದ ಚರ್ಮ ವ್ಯಾಧಿಗಳನ್ನು ಎರಡರಿಂದ ಆರು ವಾರಗಳೊಳಗೆ ಚಿಕಿತ್ಸೆಗೊಳಪಡಿಸಿದರೆ ತಕ್ಷಣ ಗುಣ ಮಾಡಬಹುದಾದರೂ ಅವರು ನಮ್ಮ ಬಳಿಗೆ ಬರುವಾಗ ಸಾಕಷ್ಟು ಸಾವಕಾಶ ಮಾಡುತ್ತಾರೆ ಎಂದು ವೈದ್ಯರೊಬ್ಬರು ಹೇಳುತ್ತಾರೆ. ಕಾಂತಿವರ್ಧಕ ಸಾಮಗ್ರಿಗಳಲ್ಲಿ ಕಲಬೆರಕೆಯಾಗಿರುವುದು ನಮ್ಮ ಗಮನಕ್ಕೆ ಬಂದರೆ ಇಂಡಿಯನ್ ಸ್ಟ್ಯಾಂಡರ್ಡ್ ಇನ್‌ಸ್ಟಿಟ್ಯೂಟಿಗೆ ತಿಳಿಸಿದರೆ ಅವರು ಯೋಗ್ಯ ಪರಿಶೀಲನೆ ನಡೆಸುತ್ತಾರೆ. ಆದರೂ ಅಲ್ಲಿಗೆ ದೂರು ಕೊಡುವವರೇ ಅಪರೂಪ.

ದಿನದಿಂದ ದಿನಕ್ಕೆ ಕಾಸ್ಮೆಟಿಕ್ಸ್‌ಗಳ ಬೆಲೆಯೇರುತ್ತಿರುವಾಗ ದುಬಾರಿ ಬೆಲೆ ತೆತ್ತು ನಾವು ಅದನ್ನು ಕೊಂಡು ವ್ಯಥೆ ಪಡಬೇಕಾಗಿಲ್ಲ. ನಿಯಮಿತವಾಗಿ ವ್ಯಾಯಾಮ ಮಾಡಿ, ಚೆನ್ನಾಗಿ ಮಿಂದು, ಮೆತ್ತನೆಯ ಶುಭ್ರವಾದ ಬಟ್ಟೆಯಲ್ಲಿ ಮೈಯೊರೆಸಿಕೊಳ್ಳುವುದರಿಂದ ಚರ್ಮದಲ್ಲಿ ರಕ್ತ ಪರಿಚಲನೆ ರಭಸದಿಂದ ಸಾಗಿ ಕಾಂತಿ ಪಡೆಯುತ್ತದೆ. ಚರ್ಮ ಕಾಂತಿಗೆ ಅಗತ್ಯವಾದದ್ದು 'ಡಿ' ಅನ್ನಾಂಗ. ಸೂರ್ಯನ ಎಳೆಕಿರಣಗಳ ಸೂರ್ಯಸ್ನಾನ ಮಾಡಿದರೆ ಚರ್ಮಕೋಶಗಳಲ್ಲಿರುವ ಎರ್ಗೋಸ್ಟಾಲ್ ಅಂಶ ಡಿ ಅನ್ನಾಂಗವಾಗಿ ಪರಿವರ್ತನೆಗೊಂಡು, ನಮಗೇ ಸಿಗುತ್ತದೆ.

ತುಪ್ಪ, ಹೊನ್ನೆಣ್ಣೆಗಳ ದೀಪದ ಹೊಗೆಯಿಂದ ಮನೆಯಲ್ಲೇ ಬೆಣ್ಣೆಯಂತಹ ಕಾಜಲ್‌ಗಳನ್ನು ತಯಾರಿಸಬಲ್ಲಿರಿ. ಕೆನ್ನೆಗೆ ದಿನಾಲೂ ಅರಶಿನ ಲೇಪಿಸಿ, ಕಡ್ಲೆ ಹಿಟ್ಟು ಹಚ್ಚಿ ತೊಳೆಯುವುದರಿಂದ ಥಳಥಳ ಹೊಳೆಯುವ ರಂಗಿನ ಕೆನ್ನೆ ನಿಮ್ಮದಾಗುತ್ತದೆ. ಯಾವುದೇ ಹೂವಿನ ಸುಗಂಧ ತೈಲವನ್ನು ನಾವೇ ಮಾಡಬಹುದು. ಆಯಾ ಹೂವಿನ ದಳಗಳನ್ನು ಸ್ವಲ್ಪ ನೀರಿನಲ್ಲಿ ಕುದಿಸಿ, ಕೆಲವು ಹನಿ ಬಾದಾಮಿ ತೈಲ ಸೇರಿಸಿದರೆ ಬಹು ಪರಿಮಳವಾಗಿರುತ್ತದೆ.

ದಿನವೂ ಬೆಳಗ್ಗೆ ಮತ್ತು ರಾತ್ರೆ ಮಲಗುವಾಗ ಹಾಲಿನ ಕೆನೆಯನ್ನು ಮುಖದ ಚರ್ಮಕ್ಕೆ ಲೇಪಿಸಿಕೊಂಡು ಸೌತೇಕಾಯಿಯ ನೀರಿನಿಂದ ತೊಳೆಯುತ್ತಿದ್ದರೆ ಮೊಡವೆಗಳು ಏಳುವುದಿಲ್ಲ. ಮುಖ ಮೃದುವಾಗುತ್ತದೆ. ಬೇಸಿಗೆ ಕಾಲದಲ್ಲಿ ಚರ್ಮ ಒಡೆಯದಂತೆ, ಒಣಗದಂತೆ ಸೌತೆಕಾಯಿ ನೀರು ಕಾಪಾಡುತ್ತದೆ; ಅದಕ್ಕೆ ಸ್ವಲ್ಪ ಲಿಂಬೆರಸವನ್ನು ಸೇರಿಸಬೇಕು ಅಷ್ಟೇ. ಅದರಿಂದ ಚರ್ಮದಿಂದ ಹೊರಬರುವ ಜಿಡ್ಡು ನಿವಾರಣೆಯಾಗುತ್ತದೆ. ಗುಲಾಬಿಯ ಪನ್ನೀರಿಗೆ ಲಿಂಬೆರಸ ಮತ್ತು ಗ್ಲಿಸರಿನ್ ಬೆರೆಸಿ, ಒಳ್ಳೆಯ ಕೋಲ್ಡ್ ಕ್ರೀಮು ತಯಾರಿಸಲು ಸಾಧ್ಯವುಂಟು. ದಿನಾಲೂ ಹಾಲಿನಲ್ಲಿ ಚಿಟಿಕೆ ಕಸ್ತೂರಿಯನ್ನು ಕದಡಿ ಮುಖಕ್ಕೆ ಬಳಿಯುತ್ತಿದ್ದರೆ ಗುಳ್ಳೆಗಳುಂಟಾಗುವುದಿಲ್ಲ. ಎಳೆ ಸೀಯಾಳದ ನೀರಿನಲ್ಲಿ ಮುಖ ತೊಳೆಯುವುದೂ ಒಂದು ಸೌಂದರ್ಯವರ್ಧಕ.

ಇದೇ ರೀತಿಯಲ್ಲಿ ಹಲವಾರು ಸೌಂದರ್ಯ ಪ್ರಸಾಧನಗಳನ್ನು ನಾವೇ ತಯಾರಿಸಿಕೊಳ್ಳುವುದರಿಂದ ಖೋಟಾ ಕಾಸ್ಮೆಟಿಕ್ಸ್‌ಗಳಿಗೆ ದುಬಾರಿ ಬೆಲೆ ತೆತ್ತು ರೋಗಕ್ಕೀಡಾಗುವ ಪ್ರಸಂಗ ತಪ್ಪುತ್ತದೆ. **

---

ಪ್ರಾರ್ಥಿಸುವುದು ತಪ್ಪಲ್ಲ. ಆದರೆ ಗಂಡು ಸಂತಾನಕ್ಕಾಗಿ ಹೀಗೆ ಸಾಮೂಹಿಕವಾಗಿ ಯಾಗ ನಡೆಸುವುದೆಂದರೆ ನಿಜ ಅರ್ಥದಲ್ಲಿ ಸಾಮಾಜಿಕವಾಗಿ ಹೆಣ್ಣನ್ನು ಕಡೆಗಣಿಸುವುದೇ ಆಗಿದೆ. ಕೊಡಲಿಯ ಕಾವು ಕುಲಕ್ಕೆ ಮೃತ್ಯು ಎಂಬಂತೆ ಸನಾತನ ಧರ್ಮದಲ್ಲಿ ಹೆಣ್ಣಿಗೆ ನೀಡಿದ ಗೌರವವನ್ನು (ಯತ್ರನಾರ್ಯಸ್ತು ಪೂಜ್ಯಂತೆ ರಮಂತೇ ತತ್ರ ದೇವತಾಃ) ಈ ಯಾಗದ ಜ್ವಾಲೆಗಳು ತಮ್ಮ ಕೆನ್ನಾಲಿಗೆಗಳಿಂದ ಸುಟ್ಟು ಬೂದಿಮಾಡುವ ಅಪಾಯವಿದೆ. ಧರ್ಮದ ಹೆಸರಿನಲ್ಲಿ ಧರ್ಮಕ್ಕೆ ಕಳಂಕ ತಗಲಿಸುವುದು ಎಷ್ಟು ಸರಿ? ಸನಾತನ ಧರ್ಮ ಹೆಣ್ಣನ್ನು ಕಡೆಗಣಿಸಲು ಹೇಳಿದೆಯೆ?

ಆಧುನಿಕ ವೈಜ್ಞಾನಿಕ ಉಪಕರಣಗಳನ್ನು ಉಪಯೋಗಿಸಿ ಭ್ರೂಣಾವಸ್ಥೆಯಲ್ಲೇ ಲಿಂಗಪರೀಕ್ಷೆ ನಡೆಸಿ ಹೆಣ್ಣು ಭ್ರೂಣಕ್ಕೆ ಗರ್ಭದಲ್ಲೇ ಮೋಕ್ಷ ಕಾಣಿಸಿದ (ಮುಂಬೈ ವರ್ಷವೊಂದಕ್ಕೆ 30.000 ದಿಂದ 50.000 ಹೆಣ್ಣು ಭ್ರೂಣಗಳನ್ನು ನಾಶ ಪಡಿಸಲಾಗುತ್ತಿದೆಯೆಂದು ವರದಿಗಳು ತಿಳಿಸುತ್ತವೆ) ವೈಜ್ಞಾನಿಕ ಪ್ರಗತಿಯನ್ನು ಸ್ತ್ರೀ ವಿರೋಧಿಯಾಗಿಸುವ ಪ್ರವೃತ್ತಿ. ಹಾಗೂ ಸನಾತನ ಧರ್ಮದ ಪುನರುತ್ಥಾನದ ಹೆಸರಿನಲ್ಲಿ ಧರ್ಮವನ್ನು ಸ್ತ್ರೀ ವಿರೋಧಿಯಾಗಿಸುವ ಪ್ರವೃತ್ತಿಗಳು ಕೈಕೈಮಿಲಾಯಿಸಿ ಸಾಮಾಜಿಕ ಅಸಮತೋಲನಕ್ಕೆ ನಾಂದಿ ಹಾಡುವ ಅಪಾಯ ಇಂದು ಎದುರಾಗಿದೆ.

ಸಾರ್ಕ್‌ನ "ಹೆಣ್ಣು ಶಿಶುವಿನ ದಶಕ"ದಲ್ಲಿ, ಕೇರಳ ಭಾರತ ಹಾಗೂ ವಿದೇಶದಲ್ಲಿ ಗಂಡು ಮಗುವಿಲ್ಲದ ದಂಪತಿಗಳಿಗೆ ಪುತ್ರ ಸಂತಾನ ಕರುಣಿಸುವ ಪುತ್ರಕಾಮೇಷ್ಟಿ ಯಾಗಕ್ಕೆ ಸಾಕ್ಷಿಯಾಗುವ ಸಂದಿಗ್ಧ ಸ್ಥಿತಿಗೆ ತಳ್ಳಲ್ಪಟ್ಟಿದೆ. ಜೊತೆಗೆ ಮೂರನೇ ಪಂಚವಾರ್ಷಿಕ ಯೋಜನೆಯಿಂದ ಎಂಟನೇ ಪಂಚವಾರ್ಷಿಕ ಯೋಜನೆಯ ವರೆಗೆ 1.924 ಕೋಟಿ ರೂಪಾಯಿಗಳ ವೆಚ್ಚದಲ್ಲಿ ಹಮ್ಮಿಕೊಂಡ ಕುಟುಂಬ ಯೋಜನೆಯು ಮೂಲೋದ್ದೇಶ ಮೂಲೋತ್ಪಾಟನವಾಗಲೂ ಬಹುದು. ಗಂಡು ಸಂತಾನದ ಬಯಕೆ ಸನ್ 2,000 ನೇ ಇಸವಿಯಲ್ಲಿ ಜನಸಂಖ್ಯೆಯನ್ನು 1.007 ಮಿಲಿಯನ್‌ಗೂ ಮೀರಿಸುವ ಸಾಧ್ಯತೆಗಳಿವೆ. ಭಾರತ ಈ ಭಾರ ತಾಳಲಾರದು.

ಜನಸಂಖ್ಯಾ ಸ್ಫೋಟಕ್ಕೆ ಪ್ರೋತ್ಸಾಹಿಸುವ, ಅಗತ್ಯ ವಸ್ತುಗಳ ಧ್ವಂಸಕ್ಕೆ ಕಾರಣವಾಗುವ, ಸ್ತ್ರೀ ವಿರೋಧಿ ಧೋರಣೆಗೆ ಪುಟ ನೀಡುವ, ಒಟ್ಟಾರೆ ಹೇಳಬೇಕೆಂದರೆ ಧರ್ಮದ ಹೆಸರಿನಲ್ಲಿ ಧರ್ಮವಿರೋಧಿ ಕಾರ್ಯಕ್ಕೆ ಪ್ರಚೋದನೆ ನೀಡುವ ಇಂತಹ ಆಚರಣೆಗಳ ಕುರಿತು ಧರ್ಮಭೀರುಗಳು ಹಾಗೂ ಮಹಿಳೆಯರು ಎಚ್ಚರದಿಂದಿರಬೇಕಾಗಿದೆ. ●

ಮಿನಿಕಥೆ:

# ತಾಯಿ

—ಎಚ್.ಕೆ. ಅನಸೂಯ ಸಂಪತ್



ತನ್ನ ಅಂತರಾಳದಲ್ಲಿದ್ದ ವಿಷಯವನ್ನು ಪತ್ನಿಗೆ ಹೇಗೆ ತಿಳಿಸುವುದೆಂದು ತಿಳಿಯದೆ ಒದ್ದಾಡುತ್ತಿದ್ದ ಸುಧೀರ್. ಈಗಾಗಲೇ ಮೂರು ಹೆಣ್ಣು ಮಕ್ಕಳಾಗಿವೆ. ನಾಲ್ಕನೆಯ ಮಗು ಬೇಡವೆಂದು ನಿರ್ಧರಿಸಿ ಆಪರೇಶನ್ ಟೇಬಲ್ ಹತ್ತಲು ಸಿದ್ಧವಿದ್ದ ಮಡದಿಯನ್ನು ಅವನೇ ಬಲವಂತದಿಂದ ಕೆಳಗಿಳಿಸಿದ್ದಾನೆ. ಇದರರ್ಥ ಇನ್ನೂ ಮಕ್ಕಳು ಬೇಕೆಂಬುದಲ್ಲ. ಮಕ್ಕಳಾಗುವ ಸಾಮರ್ಥ್ಯ ಕಳೆದುಕೊಳ್ಳಬಾರದೆಂಬ ಅಭಿಲಾಷೆ. ಮೂರು ಮಕ್ಕಳು ಆಯುರಾರೋಗ್ಯ ಇಟ್ಟುಕೊಂಡು ನೆಮ್ಮದಿಯಾಗಿರಲಿ ಸದ್ಯ. ಆದರೂ ಆಕಸ್ಮಾತ್ ಹೆಚ್ಚು ಕಡಿಮೆಯಾದರೇ...? ಅದಕ್ಕಾಗಿ ಶಸ್ತ್ರಚಿಕಿತ್ಸೆ ಬೇಡವೆಂದು ನಿರ್ಧರಿಸಿದ್ದಾಗಿದೆ.

ಆದರೆ ಈಗ ಇನ್ನೊಂದು ಮಗು ಬೇಕೆಂದು ಸುಧಾಳಿಗೆ ಹೇಗೆ ಹೇಳಲು ಸಾಧ್ಯ? ಮೂರು ಹೆಣ್ಣು ಮಕ್ಕಳಿಗೆ ನೆಲೆ ಕಾಣಿಸಿದರೆ ಸಾಕಾಗಿದೆ ಎಂದು ನಿತ್ಯವೂ ಗೊಣಗುತ್ತಾಳೆ. ಆದರೆ ಗೆಳೆಯ ತನ್ನನ್ನು ಬೇಡಿದ್ದಕ್ಕೆ "ಅಸ್ತು" ಎಂದಾಗಿದೆಯಲ್ಲ.

"ಸುಧಾ...ನನ್ನ ಫ್ರೆಂಡ್ ಶ್ರೀಧರನ ಹೆಂಡತಿಗೆ ಮಕ್ಕಳಾಗುವುದು ಸಾಧ್ಯವೇ ಇಲ್ಲವೆಂದು ಡಾಕ್ಟರು ಹೇಳಿದ್ದಾರಂತೆ. ನಾಲ್ಕು ತಲೆಮಾರು ತಿಂದು ತೇಗಿದರೂ ಮುಗಿಯದ ಆಸ್ತಿ. ಆದರೆ ವಾರಸುದಾರರೇ ಇಲ್ಲ."

"ಪಾಪ...ಹೀಗಾಗಬಾರದಿತ್ತು. ದೇವರು ಹಾಗೇ ನೋಡಿ. ಎಲ್ಲರಿಗೂ ಎಲ್ಲವನ್ನೂ ಕೊಡುವುದಿಲ್ಲ. ಅವರಿಗಿರುವ ಹಣದಲ್ಲಿ ಕಾಲುಭಾಗ ನಮಗಿದ್ದಿದ್ದರೆ ಮೂರು ಮಕ್ಕಳೂ ರಾಜಕುಮಾರಿಯರಾಗಬಹುದಿತ್ತು."

"ಅದೇ ವಿಷಯ ಹೇಳೋಣ ಅಂತ ಬಂದೆ ಸುಧಾ. ನೀನು ಮನಸ್ಸು ಮಾಡಿದರೆ ಅವರು ಈಗಲೂ ರಾಜಕುಮಾರಿಯರಾಗಬಹುದು."

"ಹೇಗೆ...?"

"ನಮ್ಮ ಒಂದು ಮಗುವನ್ನು ಶ್ರೀಧರನಿಗೆ ಕೊಡೋಣ. ಈಗ ಇರುವ ಮೂರು ಮಕ್ಕಳು ನಮಗೇ ಇರಲಿ. ದಯವಿಟ್ಟು ಇನ್ನೊಂದು ಮಗುವನ್ನು ಹೆತ್ತುಕೊಡು ಸುಧಾ. ಅವನು ನಮಗೆ ಎರಡು ಲಕ್ಷ ಕೊಡಲು ಸಿದ್ಧನಿದ್ದಾನೆ. ಹೇಗಿದ್ದರೂ ನಿನಗೆ ನಾಲ್ಕನೆಯ ಮಗು ಬೇಡ. ಅವನಿಗೆ ನಮ್ಮ ನಾಲ್ಕನೆಯ ಮಗು ಕೊಟ್ಟು ಹಣ ಪಡೆಯೋಣ. ನಾನು ಹಾಗೆಂದು ಅವನಿಗೆ ಮಾತು ಕೊಟ್ಟಿದ್ದೇನೆ."

"ಏನು...ನಾನು ಮತ್ತೊಮ್ಮೆ ತಾಯಿಯಾಗಬೇಕಾ...? ಅವರಿಗಾಗಿ ನನ್ನ ಆರೋಗ್ಯ ಬಲಿ ಕೊಡಬೇಕಾ? ನಾನೇನು ಹೆರುವ ಯಂತ್ರವಲ್ಲ. ಯಾರನ್ನು ಕೇಳಿ ಮಾತು ಕೊಟ್ಟಿರಿ...?" ಕೂಗಾಡಿದಳು ಸುಧಾ.

ಮೊದಮೊದಲು ಕೂಗಾಡಿದರೂ ನಂತರ ಮೆತ್ತಗಾದಳು. ಮತ್ತೊಬ್ಬ ಬಂಜೆಯ ಮಡಿಲನ್ನು ತುಂಬುವ ಶಕ್ತಿ ತನಗಿರುವಾಗ ಏಕಾಗಬಾರದು? ವಿದೇಶದಲ್ಲಿ ಎಷ್ಟೋ ಮಹಿಳೆಯರ ಗರ್ಭಕೋಶವನ್ನೇ ಎರವಲು ಪಡೆದು ಮಗುವನ್ನು ಬೆಳೆಸುತ್ತಾರಂತೆ. ಇಲ್ಲಿ ಹಾಗೇನಿಲ್ಲವಲ್ಲ. ನನ್ನ ಗಂಡನಿಂದಲೇ ಪಡೆಯುವ ಮಗು. ಆಕಸ್ಮಾತ್ ಗಂಡು ಮಗುವಾದರೆ ಕೊಡುವುದಿಲ್ಲವೆಂದು ಗಂಡನಿಗೆ ಹೇಳಿದಾಗಿದೆಯಲ್ಲ.

ಸುಧಾಳ ಒಪ್ಪಿಗೆ ದೊರೆತ ಕೂಡಲೇ ಸುಧೀರ್‌ಗೆ ಆನಂದ. ದೇವರ ದಯೆಯಿಂದ ಸುಧಾ ನಾಲ್ಕನೆಯ ಮಗುವಿಗೆ ಗರ್ಭಿಣಿಯಾದಾಗ ಅದರ ಖರ್ಚು, ವೆಚ್ಚವನ್ನು ಸುಧೀರ್ ದಂಪತಿಗಳೇ ವಹಿಸಿಕೊಂಡರು. ನಿಯಮಿತವಾಗಿ ವೈದ್ಯರಿಂದ ತಪಾಸಣೆಯಾಯಿತು...ಅವಳ ಮನೆಯ ಪರಿಸ್ಥಿತಿಯೂ ಸುಧಾರಿಸಿತು.

ನವಮಾಸ ಧರಿಸಿ ಕೊನೆಗೊಂದು ದಿನ ಮುದ್ದಾದ ಹೆಣ್ಣು ಮಗುವಿನ ತಾಯಿಯಾದಳು ಸುಧಾ!

ಮೂರನೇ ದಿನ ಶ್ರೀಧರ್ ದಂಪತಿಗಳು ಮಗುವಿಗಾಗಿ ಬಂದರು. ಸುಧೀರ್ ಹೆಂಡತಿಗೆ ಮಗುವನ್ನು ಅವರಿಗೆ ಕೊಡುವಂತೆ ಆದೇಶಿಸಿದ.

ಮಗುವಿಗೆ ಮಮತೆಯಿಂದ ಮೊಲೆಯೂಡಿಸುತ್ತಿದ್ದ ಸುಧಾಳಿಗೆ ಹೊಟ್ಟೆಯುರಿದು ಹೋಯಿತು.

"ನನ್ನ ರಕ್ತ ಮಾಂಸ ಹಂಚಿಕೊಂಡು ಜನಿಸಿದ ಈ ನನ್ನ ಕಂದನನ್ನು ಯಾರಿಗೂ ಕೊಡುವುದಿಲ್ಲ. ನಾನು ನನ್ನ ಪ್ರಾಣ ಒತ್ತೆಯಿಟ್ಟಾದರೂ ಅದನ್ನು ಸಾಕುತ್ತೇನೆ. ಹೆಣ್ಣಾದರೂ, ಗಂಡಾದರೂ, ಹತ್ತನೇ ಮಗುವಾದರೂ ಹೆತ್ತವಳಿಗೆ ಅದು ಕರುಳಕುಡಿ. ಅದಕ್ಕೆ ನಿಮಿತ್ತ ಮಾತ್ರವಾದ ಗಂಡಸರಿಗೆ ಹೇಗೆ ಗೊತ್ತಾಗಬೇಕು ತಾಯಿ ಕರುಳಿನ ವೇದನೆ? ನನ್ನ ಕರುಳನ್ನು ನಾನು ಹಣಕ್ಕೆ ಮಾರಲಾರೆ. ನೀವು ನನಗಾಗಿ ಖರ್ಚು ಮಾಡಿದ ಹಣವನ್ನು ಬಿಸಾಕ್ತೀನಿ" ಎಂದು ಅಳುತ್ತಾ ನುಡಿದು ಮಗುವನ್ನು ಎದೆಗವಚಿಕೊಂಡಾಗ ಶ್ರೀಧರ್ ದಂಪತಿಗಳು ನಿರಾಶೆಯಿಂದ ಕುಸಿದಿದ್ದರು. **

# ಅಂದದ ಡಿಸೈನುಗಳು

**ಚಿತ್ರ: 1 ಮತ್ತು 2**

ಕರ್ಟನ್, ತಲೆದಿಂಬು ಕವರು, ಅಥವಾ ಟೇಬಲ್ ಕ್ಲಾಥ್‌ನ ಮಧ್ಯಕ್ಕೆ ಈ ಡಿಸೈನುಗಳನ್ನು ಹಾಕಬಹುದು.

ಬಣ್ಣ ಬಣ್ಣದ ದಾರಗಳಿಂದ ಎಳೆ ಅಥವಾ ಸರಪಳಿ ಹಾಕಬಹುದು.

ಇಲ್ಲವೇ ನೀವು ಪೇಂಟ್ ಮಾಡಬಲ್ಲಿರಾದರೆ ಮಧ್ಯದಲ್ಲಿನ ನಕ್ಷೆಗೆ ಹಾಗೂ ಸುತ್ತಲಿನ ನಕ್ಷೆಗೆ ಹೊಂದಿಕೊಳ್ಳುವಂತೆ, ಅರಿವೆ ಮೇಲೆ ಮಾಡುವ ಪೇಂಟ್‌ಗಳಿಂದ ಪೇಂಟ್ ಮಾಡಿ. ಡಿಸೈನು ಸುಂದರವಾಗಿ ಕಾಣುವುದು.

**ಚಿತ್ರ: 3**

ಟೇಬಲ್ ಕ್ಲಾಥ್‌ನ ಅಂಚು (border) ಆಗಿ ಈ ನವಿಲನ್ನು ತೆಗೆಯಬಹುದು. ಸಾಲಾಗಿ ಒಂದರ ಹಿಂದೆ ಒಂದರಂತೆ ಈ ಚಿತ್ರ ತೆಗೆಯುತ್ತ ಹೋಗಿ. ನಂತರ ದಾರದಿಂದ ತುಂಬಿ. ಅಥವಾ ಪೇಂಟ್ ಮಾಡಿ.



1

ಚಿಕ್ಕ ಮಕ್ಕಳ ಫ್ರಾಕ್, ಲಂಗಗಳಿಗೆ ಅಂಚು ಮಾಡಿ ಪೇಂಟ್ ಮಾಡಿ. ಬಹಳ ಸುಂದರ.

ಗೋಲ್ಡನ್ ಕಲರ್‌ನ ಪುಡಿಯಲ್ಲಿ ಮೀಡಿಯಮ್ ಸೇರಿಸಿ ಕಲಸಿ ಬಣ್ಣ ಮಾಡಿಕೊಳ್ಳಿ.



3



2

ಕೆಂಪು ಅಥವಾ ಕಪ್ಪು ಎದ್ದು ಕಾಣುವ ಬಟ್ಟೆಯಲ್ಲಿ ಈ ನವಿಲು ಚಿತ್ರಿಸಿ ಆ ಗೋಲ್ಡನ್ ಬಣ್ಣದಿಂದ ಪೇಂಟ್ ಮಾಡಿ.

**ಚಿತ್ರ: 4**

ಈ ಗೆರೆ ಡಿಸೈನನ್ನು ಸೀರೆ, ಲಂಗ,

ಟೇಬಲ್ ಕ್ಲಾಥ್, ತಲೆದಿಂಬು ಕವರು ಬೇಕಾದ್ದಕ್ಕೆ ಅಂಚಾಗಿ ಉಪಯೋಗಿಸಬಹುದು.

ಗೆರೆಗುಂಟ ದಾರದಿಂದಲೂ 'ಎಳೆ'ಯಾಗಿ ತುಂಬಬಹುದು. ಅಥವಾ ಈ ಡಿಸೈನನ್ನು ಉಪಯೋಗಿಸಿ.

**ಚಿತ್ರ : 5**

ಬ್ಲೌಜಿನ ತೋಳಿನ ಅಂಚು, ಬ್ಲೌಜಿನ ಬೆನ್ನಿನ ಕೆಳ ಅಂಚಿಗೆ ಈ ಡಿಸೈನುಗಳನ್ನು ಹಾಕಬಹುದು. ಚಿಕ್ಕ ಚೌಕ ಡಿಸೈನುಗಳನ್ನು ಮಾಡಿ. ಅಂದರೆ ಅಚ್ಚು ಒತ್ತಿದಂತೆ ಆಗಿ ಡಿಸೈನು ತುಂಬಾ ಸುಂದರವಾಗಿ ಕಾಣುವುದು.

ಬೇಕಾದರೆ ಬಣ್ಣ ಬಣ್ಣದ ದಾರಗಳಲ್ಲಿ ತುಂಬಿ.

— ಚಿತ್ರಗಳು ಮತ್ತು ಲೇಖನ



4





5





5

ಸಾಲಾಗಿ ಚಿತ್ರಿಸಿ. ಅದಕ್ಕೆ ಕೆಂಪು, ಕರಿ, ನೀಲಿ, ಹಳದಿ ಬಣ್ಣಗಳಿಂದ ಬಟ್ಟೆಗೆ ಹೊಂದುವಂತೆ ಸೂಕ್ಷ್ಮವಾಗಿ ಪೇಂಟ್ ಮಾಡಿ. ಪ್ರಿಂಟ್ ಹಾಕಿದಂತೆ ಕಾಣುವುದು.

ಈ ಡಿಸೈನಿಗೆ ದುಂಡಗೆ ಸುತ್ತಲೂ ಮತ್ತೆ ಇದೇ ಡಿಸೈನ್ ಹೊಂದಿಸಿ. ದೊಡ್ಡ ಡಿಸೈನ್ ಆಗುವುದು. ಟೇಬಲ್ ಕ್ಲಾಥ್ ಇತ್ಯಾದಿಗಳಿಗೆ ಮುಂದೆ ಸಾಲಾಗಿ ಹೊಂದಿಸಿ ಉದ್ದವಾಗಿ ಮಾಡಿ.

ಸೀರೆಯಲ್ಲಿ ಚಿತ್ರ 4 ನ್ನು ಬಾರ್ಡರ್ ಆಗಿ ಹಾಕಿದರೆ ಚಿತ್ರ 5 ರಲ್ಲಿಯ ಡಿಸೈನುಗಳನ್ನು ಮಧ್ಯದಲ್ಲಿ ಅಲ್ಲಲ್ಲಿಗೆ ಹಾಕಬಹುದು.

ಗೆರೆ ಒಂದೇ ಸಮನಾಗಿರುವಂತೆ ಪೇಂಟ್

ವಿಶಾಲಾಕ್ಷಿ ದೇಶಪಾಂಡೆ
ಶಿರಹಟ್ಟಿ.

# ನಮ್ಮ ಪರಿಸರ ಮತ್ತು ಅದರ ರಕ್ಷಣೆ

## 'ಪರಿಸರ' ಎಂದರೇನು ?

ನಮ್ಮ ಸುತ್ತ ಮುತ್ತಲಿನಲ್ಲಿರುವ ಗಾಳಿ, ನೀರು, ಮಣ್ಣು, ಕಾಡು, ನದಿ, ಸೂಕ್ಷ್ಮಾಣುಗಳು, ಮುಂತಾದ ಸಮಸ್ತ ಜೀವ ಸಂಕುಲಗಳೆಲ್ಲವೂ ಸೇರಿ 'ಪರಿಸರ' ಎಂದಾಗಿದೆ.

ನಮ್ಮ ಬದುಕಿನ ಪ್ರತಿಯೊಂದು ಕ್ಷಣಗಳೂ ಈ ಪರಿಸರದೊಂದಿಗೆ ಹೊಸೆದುಕೊಂಡಿದೆ. ನಮ್ಮ ಆಹಾರ, ನಿದ್ದೆ, ಕೆಲಸ ಮುಂತಾದ ದೈನಂದಿನ ಚಟುವಟಿಕೆಗಳೆಲ್ಲವೂ ಇದರೊಂದಿಗೇ ಬೆಸೆದಿದೆ.

ತನ್ನ ಪರಿಸರದ ಮಡಿಲಿನಲ್ಲಿ ನಮ್ಮೆಲ್ಲರನ್ನೂ ರಕ್ಷಿಸುವ ಈ ಭೂಮಿಯೆಂಬುದು ವಿಶ್ವದ ಅಸಂಖ್ಯ ಆಕಾಶ ಕಾಯಗಳ ಪೈಕಿ ಒಂದು ಪುಟ್ಟ ಗ್ರಹ. ಈ ಭೂಮಿಯನ್ನು ಹೊರತುಪಡಿಸಿದರೆ ಇನ್ನಿತರ ಯಾವುದೇ ಗ್ರಹಗಳಲ್ಲಿ ಜೀವಿಗಳಿರುವುದು ಅಸಂಭವನೀಯ. ಇಲ್ಲಿರುವ ಅಸಂಖ್ಯ ಜೀವಿಗಳೂ ಭೂಮಿಯ ತೆಳುವಾದ ಹೊರಕವಚದಲ್ಲಿಯೇ ಜೀವಿಸಿಕೊಂಡಿವೆ. ಇದೇ ಭೂಮಿಯ 'ಜೀವ ಗೋಲ.'

ಭೂಮಿಯ 72% ಭಾಗವನ್ನು ಆವರಿಸಿರುವ ಸಮುದ್ರ, ಭೂಮಿಯ ಹವಾಮಾನವನ್ನು ನಿಯಂತ್ರಣದಲ್ಲಿಡುವ ಒಂದು ತೆರನಾದ 'ಉಷ್ಣ ಕೋಶ' ದಂತೆ ಕೆಲಸ ಮಾಡುತ್ತಿದೆ. ಇಲ್ಲಿ ದೊರೆಯುವ ಅಗಣಿತ ಸಂಪತ್ತುಗಳು ಮಾತ್ರವಲ್ಲದೆ. ಇಡೀ ಜೀವಕೋಟಿಗಳಿಗೆ ಅತೀ ಅಗತ್ಯವೆನಿಸುವ ಆಮ್ಲಜನಕದ ಶೇ. 72 ಭಾಗದಷ್ಟು ಇಲ್ಲಿರುವ ಸಾಗರ ಸಸ್ಯಗಳಿಂದಲೇ ದೊರೆಯುತ್ತದೆ.

## 'ಅರಣ್ಯ'–ಒಂದು ಶ್ವಾಸಕೋಶ

'ಅರಣ್ಯ' ಎಂಬುದು ಒಂದು ರೀತಿಯ ಕೃತಕ ಜೀವಕೋಶ. ಇದು ತನಗಾಗಿ ಏನನ್ನೂ ಬಯಸದೆ, ಬಯಸಿ ಬಂದವರಿಗೆ ತನ್ನ ಇಡೀ ಅಸ್ತಿತ್ವವನ್ನೇ ಧಾರೆಯೆರೆಯುವ ವಿಶಿಷ್ಟ ಗುಣ ಹೊಂದಿದೆ. ತನ್ನನ್ನು ಕಡಿಯಲು ಕೊಡಲಿ ಹಿಡಿದಾತನಿಗೂ ತನ್ನ ಮಡಿಲಿನಲ್ಲಿ ತಂಪಾದ ನೆರಳಿನ ಆಶ್ರಯ ನೀಡುತ್ತದೆ. ಇಲ್ಲಿ ಅಪೂರ್ವವೂ, ಅಮೂಲ್ಯವೂ ಆದ ಔಷಧ ಸಸ್ಯಗಳ ಖಜಾನೆಯೇ ಇದೆ. ವರ್ಷಕ್ಕೆ ಸರಾಸರಿ ಸುಮಾರು 1,200 ಮಿ. ಮೀ. ಮಳೆ ಬೀಳುವ ಆರ್ದ್ರ ಹವೆಯಲ್ಲಿ, ಎಲೆಗೊಬ್ಬರ ಭರಿತ ಮಣ್ಣಿನಲ್ಲಿ ಬೆಳೆಯುವ ಈ ಅರಣ್ಯಗಳು ಈಗ ಭೂಮಿಯ ತುಸು ಭಾಗದಲ್ಲಿ ಮಾತ್ರ ಕಾಣಸಿಗುತ್ತವೆ.

ಶಕ್ತಿಯ ಮೂಲವೆನಿಸಿದ ಸೂರ್ಯನಿಂದ ಸಸ್ಯಗಳು ಸೌರಶಕ್ತಿಯನ್ನು ಹೀರಿಕೊಂಡು, ಅದನ್ನು ರಾಸಾಯನಿಕ ಶಕ್ತಿಯನ್ನಾಗಿ ಬದಲಾಯಿಸುತ್ತವೆ. ಸಸ್ಯಗಳಲ್ಲಿರುವ 'ಕ್ಲೋರೋಫಿಲ್' ಮತ್ತು 'ಕ್ಲೋರೋಫಾಸ್ಟ್'ನ ಸೂಕ್ಷ್ಮ ಹಂದರದಿಂದ ಈ ಕ್ರಿಯೆ ಜರಗುತ್ತದೆ. ಸಸ್ಯದ ಬೇರು, ಕಾಂಡ, ಹಣ್ಣು ಮುಂತಾದ ಭಾಗಗಳಲ್ಲಿ ಈ ಶಕ್ತಿ ಆಹಾರವಾಗಿ ಶೇಖರಣೆಯಾಗುತ್ತದೆ. 'ದ್ಯುತಿ ಸಂಶ್ಲೇಷಣೆ' ಎಂದು ಕರೆಯಲಾಗುವ ಈ ಕ್ರಿಯೆಗಾಗಿ ಸಸ್ಯಗಳು ಭೂಮಿಯಿಂದ ನೀರು ಮತ್ತು ಖನಿಜಗಳು, ಗಾಳಿಯಿಂದ ಇಂಗಾಲಾಮ್ಲ ಹಾಗೂ ಸೂರ್ಯನಿಂದ ಬೆಳಕನ್ನು ಪಡೆದುಕೊಳ್ಳುತ್ತವೆ. ಸಸ್ಯಗಳು ಬೆಳಕಿನ ವಿಶ್ಲೇಷಣೆ ಮಾಡುವಾಗ 'ಆಮ್ಲಜನಕ'ವನ್ನು ಬಿಡುಗಡೆಗೊಳಿಸುತ್ತವೆ. ಇದೇ ಸಮಸ್ತ ಜೀವರಾಶಿ (ಪ್ರಾಣಿಗಳು) ಗಳಿಗೂ ಉಸಿರಾಟದ 'ಪ್ರಾಣವಾಯು' ವೆನಿಸಿದೆ.

## ವಿನಾಶದ ಹಾದಿಯಲ್ಲಿ

ಈ ಭೂಮಿಗೆ ತೀರಾ ಇತ್ತೀಚೆಗೆ ಪ್ರವೇಶ ಮಾಡಿದ ಮಾನವ, ತನ್ನ ಪೂರ್ವಾಪರ ವಿಚಾರ ಮಾಡದೆ ನಿಸರ್ಗದ ಅಮೂಲ್ಯ ಸಂಪತ್ತನ್ನು ಹಾಳುಗೆಡವಿದ. ಆವರೆಗಿದ್ದ ಸೂಕ್ಷ್ಮ ಸಮತೋಲನವನ್ನು ಅಲ್ಲೋಲಕಲ್ಲೋಲ ಮಾಡಿದ. ಇಲ್ಲಿದ್ದ ಪ್ರಾಣಿಗಳನ್ನು ಬೇಟೆಯಾಡಿ ಅವುಗಳ ನಾಶಕ್ಕೆ ಕಾರಣನಾದ. ಕಲ್ಲನ್ನು ಕಲ್ಲಿಗೆ ಬಡಿದು ಬೆಂಕಿಯನ್ನು ಉತ್ಪಾದಿಸಿ ಇನ್ನುಳಿದ ಜೀವಿಗಳನ್ನು ಬೆದರಿಸಿದ. ತನ್ನ ಸ್ವಾರ್ಥಕ್ಕಾಗಿ ಸುತ್ತಲಿನ ಕಾಡುಗಳನ್ನು ಕಡಿದುರುಳಿಸಿದ. ಆ ಸ್ಥಳವನ್ನು ಬಯಲು ಗದ್ದೆಗಳನ್ನಾಗಿಸಿ, ಮನೆ ಮಾಡಿ ವಾಸ್ತವ್ಯ ಹೂಡಿದ. ನಿತ್ಯ ಹರಿದ್ವರ್ಣದಿಂದ ಶೋಭಿಸುತ್ತಿದ್ದ ಈ ಭೂಮಿ ಮರುಭೂಮಿಯಂತಾಗತೊಡಗಿತು.

ಮಾನವ ತನ್ನ ಬುದ್ಧಿಶಕ್ತಿಯಿಂದ ಅಪೂರ್ವ ಯಂತ್ರಗಳನ್ನು ಸಂಶೋಧಿಸಿದ. ಭೂಗರ್ಭಕ್ಕೆ ಕೈಯಿಕ್ಕಿ ಅಲ್ಲಡಗಿದ್ದ ತೈಲ ನಿಕ್ಷೇಪವನ್ನು ಹೊರಗೆಳೆದು ಇಡೀ ವಾತಾವರಣವನ್ನೇ ಕಲುಷಿತಗೊಳಿಸಿದ. ಬೃಹತ್ ಸ್ಥಾವರಗಳನ್ನು ನಿರ್ಮಿಸಿ ಅಲ್ಲಿರುವ ಯಂತ್ರಗಳ ಹಿಂಗದ ಹಸಿವಿಗೆ ಭೂಸಂಪನ್ಮೂಲಗಳನ್ನು ನೀಡುತ್ತಾ ಯಂತ್ರಗಳ ದಾಸನೆನಿಸಿದ. ಇಂಥ ಬೃಹತ್ ಕಾರ್ಖಾನೆಗಳಿಂದ ಕಾರಲ್ಪಟ್ಟ ಹೊಗೆ ಮತ್ತು ಕಶ್ಮಲಗಳಿಂದಾಗಿ ವಾತಾವರಣವಿಡೀ ವಿಷಯುಕ್ತವಾಗಿದೆ. ಕೆರೆ, ನದಿ, ಸರೋವರಗಳೆಲ್ಲ ಮಾನವನಿಂದೆಸೆಯಲ್ಪಟ್ಟ ಹೊಲಸನ್ನು ತುಂಬುವ ಕಸದ ತೊಟ್ಟಿಗಳಂತಾಗಿವೆ. ಇದರಿಂದಾಗಿ ಭೂ ಜೀವಿಗಳಿಗೆಲ್ಲ ಆಮ್ಲಜನಕ ಪೂರೈಸುತ್ತಿದ್ದ ಜಲಸಸ್ಯಗಳ ಉಸಿರು ಕಟ್ಟತೊಡಗಿದೆ.

ಇಷ್ಟಕ್ಕೇ ತೃಪ್ತನಾಗದ ಮಾನವ ಆಕಾಶಕ್ಕೂ ಕೈಚಾಚಿದ. ಅಲ್ಲಿಗೂ ರಾಶಿರಾಶಿ ಕೃತಕ ಉಪ-ಗ್ರಹಗಳನ್ನು ಹಾರಿಸಿ ಶೂನ್ಯ ವಾತಾವರಣದ ಬಾಹ್ಯಾಕಾಶವನ್ನು ಕಲುಷಿತಗೊಳಿಸಿದ. ಈ ಕೃತಕ ಉಪಗ್ರಹಗಳನ್ನು ಉಡಾಯಿಸುವಾಗ ಕಾರುವ ಹೊಗೆ ವಾಯುಮಂಡಲವನ್ನು ಕಲುಷಿತಗೊಳಿಸುತ್ತಿದೆ.

ಇಂದು ನಾವು ಸೇವಿಸುವ ಗಾಳಿ, ನೀರು, ಇವೆಲ್ಲವೂ ವಿಷಮಯವಾಗಿದೆ. ಹೆಚ್ಚೇಕೆ, ಅತ್ಯಂತ ಸುರಕ್ಷಿತವೂ, ಉತ್ತಮವೂ ಎಂದೆನಿಸಿದ ತಾಯಂದಿರ ಎದೆ ಹಾಲಿನಲ್ಲೂ ಡಿ. ಡಿ. ಟಿ. ಯ ವಿಷಾಂಶ ಸೇರಿಕೊಂಡಿದೆ ! ನಮ್ಮ ದೇಶದ ತಾಯಂದಿರ ಹಾಲಿನಲ್ಲಿರುವ ಈ ವಿಷವಸ್ತುವಿನ ಪ್ರಮಾಣ ಜಗತ್ತಿನಲ್ಲೇ ಅತೀ ಹೆಚ್ಚು. ಆದ್ದರಿಂದ ಇಂದು ಮಗುವಿಗೆ ತನ್ನ ತಾಯಿಯ ಎದೆ ಹಾಲು ಕೂಡಾ ವಿಷದ ಹಾಲಾಗಿದೆ !

ಮಾನವ ತನ್ನ ಸುಖಕ್ಕಾಗಿ ನಡೆಸಿದ ದಾಳಿಯಿಂದಾಗಿ ಹಲವಾರು ಬಗೆಯ ಜೀವಿಗಳು ನಶಿಸಿವೆ. ವಿನಾಶದ ಅಂಚಿನಲ್ಲಿರುವ ಇಂಥ ಜೀವಿಗಳ ಪಟ್ಟಿ ದಿನೇ ದಿನೇ ವೃದ್ಧಿಯಾಗುತ್ತಿದೆ. ಅಪಾರ ಜ್ಞಾನ ಸಂಪತ್ತನ್ನು ಹೊಂದಿರುವ ಮಾನವ, ತನ್ನ ಪರಿಸರ ಸಂಪತ್ತನ್ನು ಉಳಿಸಿ ಬೆಳೆಸುವಲ್ಲಿ ಹಿಂದುಳಿದಿದ್ದಾನೆ. ಆಧುನೀಕರಣದ ಸೋಗಿನಲ್ಲಿ ನೈಸರ್ಗಿಕ ಸಂಪನ್ಮೂಲಗಳನ್ನು ವಿವೇಚನೆಯಿಲ್ಲದೆ ಬಳಸುತ್ತಿದ್ದಾನೆ.

## ಪರಿಹಾರೋಪಾಯಗಳು

ಇಂದು ನಾವು ನಮ್ಮ ಅವನತಿಯ ಅಂಚಿನಲ್ಲಿದ್ದೇವೆ. ಸಮಸ್ತ ಜೀವಸಂಕುಲದ ಉಳಿವಿನ ಪ್ರಶ್ನೆ ನಮ್ಮೆಲ್ಲರನ್ನು ಕಾಡುತ್ತಿದೆ. ಒಬ್ಬ ವ್ಯಕ್ತಿ ಅಥವಾ ಒಂದು ದೇಶ ಈ ಸಮಸ್ಯೆಯನ್ನು ಪರಿಹರಿಸಲು ಖಂಡಿತಾ ಸಾಧ್ಯವಿಲ್ಲ. ಈ ಭೂಮಿಯ ಮೇಲಿರುವ ಸಮಸ್ತ ಜನಕೋಟಿಯ ಒಮ್ಮತದಿಂದ ದುಡಿಯಬೇಕಾಗಿದೆ. ನಮ್ಮ ಪ್ರತಿಯೊಂದು ಚಟುವಟಿಕೆಗಳಿಗೂ ಏಕೈಕ ಆಧಾರವೆನಿಸಿದ ಈ ಪೃಥ್ವಿಯ ಪರಿಸರವನ್ನು ರಕ್ಷಿಸಬೇಕಾಗಿದೆ. ನಾವು ಹಾಳುಗೆಡವಿದ್ದನ್ನು ನಾವೇ ಸರಿಪಡಿಸಬೇಕು. ಇದು ನಮ್ಮ ತುರ್ತಿನ ಕರ್ತವ್ಯವಾಗಿದೆ. ಅದಕ್ಕಾಗಿ ಇಲ್ಲಿರುವ ಪ್ರತಿಯೊಂದು ಮರಗಿಡಗಳನ್ನೂ ಉಳಿಸಬೇಕು. ಮನೆಯ ಹಿತ್ತಲು, ರಸ್ತೆಯ ಬದಿಗಳು ಮುಂತಾದ ಖಾಲಿ ಸ್ಥಳದಲ್ಲೆಲ್ಲ ಸಸಿಗಳನ್ನು ಪ್ರತಿ ವರುಷವೂ ಬೆಳೆಸುತ್ತಾ ಬರಬೇಕು. ಮರಗಳು ದಟ್ಟವಾಗಿ ಬೆಳೆದಂತೆ ಜೀವಿಗಳ ಉಳಿವಿಗೆ ಆಸರೆಯಾಗುವುದಲ್ಲದೆ, ಶುದ್ಧವಾದ ಆಮ್ಲಜನಕದ ಪೂರೈಕೆಯೂ ಹೆಚ್ಚುತ್ತದೆ.

ಪರಿಸರ ರಕ್ಷಣೆಗಾಗಿರುವ 1974ರ ನೀರು ಮಾಲಿನ್ಯ ಮತ್ತು ಹತೋಟಿ ಕಾಯಿದೆ, 1981ರ ವಾಯುಮಾಲಿನ್ಯ ಮತ್ತು ಹತೋಟಿ ಕಾಯಿದೆ ಹಾಗೂ 1986ರ ಪರಿಸರ ರಕ್ಷಣಾ ಕಾಯ್ದೆಗಳನ್ನು ಕಾರ್ಯಗತಗೊಳಿಸಬೇಕು. ಮಾತ್ರವಲ್ಲದೆ ಅವುಗಳ ಉಲ್ಲಂಘನೆಯನ್ನು ಪರಿಣಾಮಕಾರಿಯಾಗಿ ಪ್ರತಿಭಟಿಸಬೇಕು. ನಮ್ಮೆಲ್ಲರ ಉಳಿವು ಪರಿಸರವನ್ನವಲಂಬಿಸಿರುವುದರಿಂದ ಅದನ್ನು ಜೋಪಾನವಾಗಿರಿಸಿಕೊಳ್ಳಲೇ ಬೇಕು.

"ಈ ಭೂಮಿ ನಮ್ಮ ಹಿರಿಯರಿಂದ ಬಂದ ಬಳುವಳಿಯಲ್ಲ. ಬದಲಾಗಿ ನಮ್ಮ ಮಕ್ಕಳು, ಮೊಮ್ಮಕ್ಕಳಿಂದ ಎರವಲು ಪಡೆದುಕೊಂಡಿರುವಂಥದ್ದು. ಇದನ್ನು ಅವರಿಗೆ ಜೋಪಾನವಾಗಿ ಹಿಂತಿರುಗಿಸುವ ಹೊಣೆಗಾರಿಕೆ ನಮಗೆಲ್ಲರಿಗಿದೆ."

—ಲೀಲಾ ಎಂ. ಕೆ.

ಹಾಸ್ಯ ಲೇಖನ :

# ನಮ್ಮ ಮಕ್ಕಳು!

—ಸುನೀತಿ ಕೃಷ್ಣಸ್ವಾಮಿ



ಮೊದಲನೆಯ ಚಿತ್ರದಲ್ಲಿ ನಮ್ಮ ನಾಯಕಿ ಜಾನಿ ಉರುಫ್ ಜಾನಕೀದೇವಿ ಒಂದು ಆಂಗ್ಲ ಪತ್ರಿಕೆ ಓದುತ್ತಾ ಸೋಫಾದ ಮೂಲೆಯಲ್ಲಿ ಮುದುರಿ ಕೂತಿದ್ದಾಳೆ. ಅವಳ ಪತಿರಾಯ ಅರ್ಥಾತ್ ರಾಯರು, ಇದೇನು ಈ ಪ್ರಾಣಿಗೆ ನಾಮಕರಣ ಮಾಡಿಲ್ವೇ ? ಎಂದು ಕೇಳಬೇಡಿ ನಾಮಕರಣ ಆಗಿತ್ತು—ಆಗಿದೆ-ಹೆಸರಿದೆ. ಆದರೆ ಅವನನ್ನು ಗುರುತಿಸುವುದು ಜಾನಿಯ ಗಂಡ ಎಂದೇ (ಅಲ್ಲವೇ) ಆ ಪ್ರಾಣಿಗೆ ಸ್ವಂತ, ಸ್ವತಂತ್ರ ವ್ಯಕ್ತಿತ್ವ ಎಲ್ಲಿದೆ ಆದ್ದರಿಂದ ಅವರ ಹೆಸರಿನ ತಂಟೆಗೆ ಹೋಗದೆ ಜಾನಿಯ ಗಂಡ ಎಂದೇ ಓದಿಕೊಳ್ಳಿ. ರಾಯರು ಬಲು ಜಾಣರು. ವೃಥಾ ವಾಗ್ವಾದ ಏಕೆಂದು ಮನೆಯಲ್ಲಿ ಇರುವಷ್ಟು ಹೊತ್ತೂ ಮೌನವ್ರತ ಆಚರಿಸುತ್ತಾರೆ. ಟಿ. ವಿ. ಯ ಮುಂದೆ ಕೂತೊಡನೆಯೇ ಅದೆಲ್ಲಿರುತ್ತೋ ನಿದ್ರಾದೇವಿ ಅವರನ್ನು ಅಪ್ಪಿ ಕಣ್ಣು ಮುಚ್ಚಿಸುತ್ತಾಳೆ. ಅವಳು ಜಾನಿಯಂತಲ್ಲ. ಹಟಮಾರಿಯಲ್ಲ. ಟಿ. ವಿ. ಸ್ವಿಚ್ ಒತ್ತಿದೊಡನೆಯೇ ಓಡೋಡಿ ಬರುತ್ತಾಳೆ. ಜಾನಿ ಅವಳನ್ನು ಹೊಡೆದಟ್ಟುವವರೆಗೂ ರಾಯರನ್ನು ಬಲು ಪ್ರೀತಿಯಿಂದ ಆವರಿಸಿ ಸುಖ ಕೊಡುತ್ತಾಳೆ.

ಹೀಗೆ ಸುಖವಾಗಿ ಕುಳಿತಲ್ಲಿಯೇ ನಿದ್ರಿಸುತ್ತಿರುವ ರಾಯರ ಕಿವಿಗೆ ಧ್ವನಿ ತರಂಗ ಅಪ್ಪಳಿಸಿ ಬೆಚ್ಚಿ ಬೀಳುವಂತಾಗುತ್ತದೆ. ಗಡಬಡಿಸಿ ಎದ್ದು ವಾಲಿದ್ದ ತಲೆ ನೆಟ್ಟಗೆ ಮಾಡಿ ಶಬ್ದ ಬಂದ ಕಡೆ ಸೊಟ್ಟ ದೃಷ್ಟಿಯಲ್ಲಿ ನೋಡುತ್ತಾರೆ. ಕೈಯಲ್ಲಿದ್ದ ಆಂಗ್ಲ ಪತ್ರಿಕೆ ಟೀಪಾಯಿಯ ಮೇಲೆ ಎಸೆದು ಹೊಸ ಸಂಶೋಧನೆ ಮಾಡಿದ ವಿಜ್ಞಾನಿಯಂತೆ. 'ಯುರೇಕಾ' 'ಯುರೇಕಾ' ಎಂದು ಅರಚಿದ ಆರ್ಕಿಮಿಡೀಸಿನಂತೆ ಜಾನಿ ಅರಚುತ್ತಾಳೆ.

"ರೀ...ರೀ...ಕೇಳಸ್ತಾರೀ...ಪ ರಿ ಹಾ ರ ಸಿಗ್ತು..."

ಸ್ಥಿತಪ್ರಜ್ಞರ ಪೋಸಿನಲ್ಲೇ ಶಾಂತವಾಗಿ ಉತ್ತರಿಸಿದರು ರಾಯರು—

"ಯಾವುದಕ್ಕೆ ಪರಿಹಾರ ? ಯಾವ ಸಮಸ್ಯೆ ? ಯಾರ ಸಮಸ್ಯೆ ?"

ಸಿಡಿಯುತ್ತಾ ಜಾನಿ ಹಣೆಗೆ ಕೈಯಿಂದ ಚಚ್ಚಿಕೊಂಡು (ಬೇರೆ ಯಾರೂ ಅವಳ ಹತ್ತಿರ ಹೋಗಲೂ ಹೆದರುವವರು. ಇನ್ನು ಅವಳ ತಲೆ ಚಚ್ಚುವರ್‍ಯಾರು ? ) ನಾನೊಂದು ಪೆದ್ದು ! (ಸ್ವಂತವಾಗಿ ಬಯ್ದುಕೊಂಡ ಬಯ್ಗಳ !) ಎಲ್ಲಾ ಬಿಟ್ಟು ನಿಮ್ಮ ಮುಂದೆ ಹೇಳ್ತಿದೀನಲ್ಲಾ ನಾನೊಬ್ಬ ದೊಡ್ಡ ಮೂರ್ಖಳು (ಸ್ವಂ) ನಿಮಗೆ ಈಗ ನಡೆದ ಪ್ರಕರಣ ಮತ್ತೊಂದು ಘಳಿಗೆಗೆ ಮರೆಯುತ್ತೆ. ಇನ್ನು ರಾತ್ರಿ ನಡೆದ ಹಗರಣ ಜ್ಞಾಪಕ-ಇರುತ್ತಾ? ರಾಯರು ಮಹಾ ಜಾಣರು. ನೆನಪಿದ್ದರೂ ಇಲ್ಲದ ಹಾಗೆ ನಟಿಸುವ ಮೇಧಾವಿ ಕಲಾವಿದರು. ಎರಡು ಕೈ ಸೇರಿದರೆ ತಾನೇ ಚಪ್ಪಾಳೆ! ತನ್ನ ಕೈ ಸೇರದೇನೇ ಹತ್ತು ಕೈಗಳ ಚಪ್ಪಾಳೆ ತಟ್ಟುವ ತಾಕತ್ತಿರುವ ಜಾನಿಯ ಕೈಗೆ ತನ್ನ ಹಸ್ತೊಂದನೆಯ ಕೈ ಸೇರಿಸಲು ಅವರಿಗೆ ಇಷ್ಟವಿಲ್ಲ. ಮೌನೇನ ಕಲಹಂ ನಾಸ್ತಿ. ಇದು ಚೆನ್ನಾಗಿ ಅರೆದು ಕುಡಿದು ರೂಢಿಸಿಕೊಂಡಿದ್ದಾರೆ. ಜಾನಿ ಅರಚುತ್ತಾ,

"ರಾತ್ರಿ ಮಕ್ಕಳ ಹಗರಣ ಕೇಳ್ಲಿಲ್ವೇನ್ರೀ ?"

"ಹೂಂ...ಏನೋ ನಿನ್ನನ್ನ ಕೇಳ್ತಾ ಗಲಾಟೆ ಮಾಡ್ತಾ ಇದ್ರು."

"ಹೂಂ...ಗಲಾಟೆ ಮಾಡೋದು, ಅಡ್ವೈಸ್ ಕೇಳೋದು, ಹಣ ಕೇಳೋದು, ಪರ್ಮಿಷನ್ ಕೇಳಿ ಲೇಟಾಗಿ ಮನೆಗೆ ಬರೋದು ಎಲ್ಲಾ ವ್ಯವಹಾರ ನನ್ನ ಹತ್ರ ತಾನೇ ?" ಎಂದು ಜಂಭದಿಂದ ಬೀಗುತ್ತಾಳೆ ಜಾನಿ. ಇವಳನ್ನು ಯಾವ ಲೆಕ್ಕಕ್ಕೂ ಇಡದೆ ತಾವು ಆಡಿದ ಆಟ, ಹಾಡಿದ ಹಾಡು ಅಂತ ಸ್ವೇಚ್ಛೆಯಾಗಿ ವರ್ತಿಸೋ ತಮ್ಮ ತ್ರಿಕೋಣಗಳು ಅಲ್ಲಲ್ಲ...ಮಕ್ಕಳು ಎಂತಹವರು ಅಂತ ರಾಯರಿಗೆ ಗೊತ್ತಿಲ್ವೇ. ಜಾನಿ ಮುಂದುವರೆಸುತ್ತಾಳೆ.

"ದೊಡ್ಡೋನು ಸೀನು ಸಿಂಗಾಪೂರಿಗೆ ಟ್ರಿಪ್ ಹೋಗಬೇಕಂತೆ, ಮಗಳು ಭಾವನಾಗೆ ಭರತ ನಾಟ್ಯದ ಹೊಸಾ ಡ್ರೆಸ್ಸು, ಪೂಂಪುಹಾರಿನಿಂದ ಡ್ಯಾನ್ಸ್‌ಗೆ ಹಾಕೋ ಒಡವೆ ಸೆಟ್ಟು ಬೇಕಂತೆ. ಮೂರನೆಯವ ಮಧುಗೆ ಮೊಪೆಡ್ ಕೊಡಿಸ

ಬೇಕಂತೆ ನಾವೇನು [illegible] ಮಕ್ಕಳೋ ಅಥವಾ ಚೀಫ್ ಮಿನಿಸ್ಟರ್ ಮಕ್ಕಳೋ ಅಂತ ಅಂದ್ಕೊಂಡ್ಬಿಟ್ಟಿದಾರೆ ಕಂಡ್ರಿ. ನೀವು ತಂದು ನನ್ನ ಕೈಲಿ ಹಾಕೋ ನಾಲ್ಕುವರೆ ಸಾವಿರ ರೂಪಾಯಿಯಲ್ಲಿ ಸಂಸಾರ ತೂಗ್ಸೋದೇ ಕಷ್ಟ. ಇನ್ನೂ...ವಿಸ್ರೀ ಮಾತಾಡ್ದ ಗುಂ ಅಂತ ಕೂತಿರಿ. ಸರಿ...ಸರಿ ನೀವು ಹಾಗೇ ಕೂತಿರಿ. ಒಳ್ಳೇದೇ ಆಯ್ತು. ಅದ್ರೂ ಪರಿಹಾರ ಸಿಗುತ್ತೆ ಅಂದ್ನಲ್ಲಾ. ಅದನ್ನಾದ್ರೂ ಏನು ಅಂತ ಕೇಳ ಬಾರ್ದಾ?" ರಾಯರು ಸಣ್ಣ ದನಿಯಲ್ಲಿ "ಏನದು?" ಎಂದು ಕೇಳಿದಾಗ,

"ಈಗ ಸುಮಾರು ಮೂರು ನಾಲ್ಕು ವಾರಗಳ ಹಿಂದೆ ಒಂದು ಕನ್ನಡ ಸಿನೆಮಾ ಟಿ. ವಿ.ಯಲ್ಲಿ ಭಾನುವಾರದ ದಿನ ತೋರಸ್ಲಿಲ್ವಾ?"

"ಯಾವ್ದು? ನಂಗೆ ನೆನಪೇ ಇಲ್ಲ."

"ಅಯ್ಯೋ ಸಧ್ಯ! ನಾನೊಂದು ಪೆದ್ದು (ಸ್ವಂ) ಟಿ. ವಿ. ಸ್ವಿಚ್ ಒತ್ತೋವಾಗ್ಲೇ ನಿದ್ದೆ ಒತ್ಕೊಂಡು ಬರತ್ತೆ ನಿಮಗೆ, ಇನ್ನು ಸಿನೆಮಾ ಹೆಸರು, ಅದರಲ್ಲಿ ಪಾತ್ರ ವಹಿಸಿದೋರು, ಅದರ ಕಥೆ ಎಲ್ಲಾ ಎಲ್ಲಿ ನೆನಪಿರುತ್ತೆ?

"ನಮ್ಮ ಮಕ್ಕಳು" ಅಂತ ಬಂದಿಲ್ಲಿಲ್ವಾ? ಅಶ್ವಥ್, ಪಂಡರಿಬಾಯಿ ಸಂಸಾರದಲ್ಲಿ ಚಂದ್ರ-ಶೇಖರ್ ಹಿರಿ ಮಗ ಮತ್ತೆ ಒಂದು ಹುಡುಗ, ಹುಡುಗಿ...ಹೂಂ...ಎಲ್ಲಾ ನಮ್ಮ ಮನೆಯಲ್ಲಿ ನಡೆಯುವ ಸೀನಿನಂತೆಯೇ ಇತ್ತು. ಏನಿದ್ರೂ ನಮ್ಮ ಹುಡುಗರದು ದೊಡ್ಡ ಕುದುರೆ ಚೇಷ್ಟೆ ಅಷ್ಟೇ. ಈಗ ಅದೇ ತರಹ ಕತೆ ಆಂಗ್ಲ ಪತ್ರಿಕೆಯಲ್ಲಿ ಬರೆದಿದ್ದಾರೆ ಕಣ್ರಿ. ಸಿನೆಮಾ ತರಹಾನೇ ಈ ಕತೆಯಲ್ಲೂ ಮಕ್ಕಳಿಗೇ ಪುರಾಕಾಸು. ಸಂಸಾರ ನಡೆಸೋ ಯಜಮಾನಿಕೆ ಎಲ್ಲಾ ಕೊಡ್ತಾರೆ... ಹಣ ಉಳಿತಾಯ ಮಾಡ್ತಾರೆ.

"ಎಷ್ಟು? ಇಪ್ಪತ್ತೈದು ಪೈಸೆ! ಆದ್ರೆ ನಮ್ಮ ಮಕ್ಕಳು ಒಳ್ಳೆ ಜವಾಬ್ದಾರಿಯಿಂದ ಸಂಸಾರ ನಿಭಾಯಿಸ್ತಾರೆ ಅಂತ ಅನ್ಸತ್ತೆ. ನಾನೇಕೆ ಈ ತಿಂಗಳು ನಮ್ಮ ಮಕ್ಳ ಕೈಲೇ ಹಣ ಕೊಡ್ಬಾರ್ದು? ಉಳಿತಾಯ ಮಾಡ್ಲಿ".

"ಮಾಡೋಣ್ವಂತೆ." ನಿರ್ವಿಕಾರವಾಗಿ ನುಡಿದರು ರಾಯರು.

"ಅದು ಹೇಗೆ ಹೇಳ್ತೀರಿ? ಸಿನೆಮಾದಲ್ಲಿ ಹುಡುಗರು ಉಳಿತಾಯ ಮಾಡ್ಲಿಲ್ವಾ? ಕತೇಲಿ ಮಾಡ್ಲಿಲ್ವಾ?"

"ಸಿನೆಮಾದಲ್ಲಿ ಏನಾಯ್ತು ಕೊನೆಗೆ? ಉಳಿಸಿದ್ದು, ಕಳ್ಳನಾಗಿ ಬಂದ ವಾದಿರಾಜ ಲಪಟಾಯಿಸಲಿಲ್ವಾ?"

"ಅರೆ! ನೀವು ನಿದ್ದೆ ಮಾಡ್ದೆ ಆ ಸಿನೆಮಾ ಪೂರ್ತಿ ನೋಡಿದ್ರಿ ಹಾಗಾದ್ರೆ?"

"ಹೂಂ—ನೋಡ್ದೆ. ಇಲ್ನೋಡು ಜಾನಿ. ಇರುಳು ಕಂಡ ಬಾವೀಲಿ ಹಗಲೇ ಬೀಳ್ಬೇಡ." ಜಾನಿ ರೋಷದಿಂದ,

"ಏನ್ರೀ ನಾಚಿಕೆ ಆಗಲ್ವಾ? ನಮ್ಮ ಮಕ್ಳ ಮೇಲೇ ನಂಬಿಕೆ ಭರವಸೆ ಇಲ್ವಾ."

"ಅವರುಗಳು ನಮ್ಮ ಮಕ್ಕಳು ಅಂತ್ಲೇ ಇಷ್ಟು ವಿವರವಾಗಿ ಹೇಳ್ತಾ ಇದೀನಿ. ಸಿನೆಮಾ ಕತೆ, ಪತ್ರಿಕೆ ಕತೇಲಿ ಆದರ್ಶ ಎತ್ತಿ ತೋರಿಸೋಕ್ಕೆ ಹಾಗೆ ತೋರ್ಸಿದಾರೆ—ಬರೆದಿದಾರೆ. ಆದರೆ ನಮ್ಮ ಮಕ್ಕಳ ಬಗ್ಗೆ ಅಷ್ಟೊಂದು ಭರವಸೆ ಇಟ್ಕೋ ಬೇಡಾ. ನೀನೇನಾದ್ರೂ ಹಣ ಅವರುಗಳ ಕೈಯಲ್ಲಿ ಕೊಟ್ಟ್ರೋ ಹೊಟ್ಟೆ ಮೇಲೆ ಒದ್ದೆ ಬಟ್ಟೆ ಅಥವಾ ಒದ್ದೆ ಬಟ್ಟು ನಾಮ ಹಾಕ್ಕೊಂಡು ತಂಬಿಗೆ ಹಿಡಿದು 'ವೆಂಕಟೇಶಾಯ ಮಂಗಳಂ' ಅಂತ ಬೀದೀಲಿ ಭಿಕ್ಷೆ ಎತ್ಬೇಕು. ಈಗ ಶ್ರಾವಣ ಮಾಸಾನೂ ಮುಗಿದೂ ಹೋಗಿದೆ."

"ರೀ...ಚ್ಯಾಲೆಂಜ್! ಒಂದು ಚಾನ್ಸ್ ಕೊಡೋಣಾರೀ."

"ಮನೆಗೆ ಬೇಕಾಗೋ ಅತ್ಯಗತ್ಯ ಸಾಮಾನಿಗೆಲ್ಲಾ ಇಟ್ಕೊಂಡು ಕೊಡು ಬೇಕಾದ್ರೆ."

"ಇನ್ನು ಏಳಿಯೋದ್ರೇನು? ಆ ಮೂರು ಮಂಗಗಳಿಗೂ ಮನೆ ಖರ್ಚಿನ ಬಿಸಿ ತಟ್ಲಿ."

"ಬಿಸಿ ತಟ್ಟೋದು ನಮಗೆ. ಅವರಿಗಲ್ಲ."

"ಒಂದು ಕೈ ನೋಡೇ ಬಿಡ್ತೀನಿ ಕಂಣ್ರಿ." ಜಾನಿಯ ಜೊತೆ ಜಗಳಕ್ಕಿಂತಾ ಕಣ್ಣು ಮುಚ್ಚಿ ಕೂರುವುದೇ ಸರಿ ಎಂದು ರಾಯರಿಗೆ ತೋಚಿತು.

ಎರಡನೆಯ ಚಿತ್ರ ಕಿರು ಕುರುಕ್ಷೇತ್ರ. ಸನ್ನಿವೇಶ-ಅಣ್ಣಾ, ತಮ್ಮ, ತಂಗಿ ಎಲ್ಲಾ ಓಟಿನ ಹಕ್ಕು ಪಡೆದ ಪಡ್ಡೆಗಳು. ಅದ ಮೇಲೆ ಹಕ್ಕು. ಬಾಧ್ಯತೆ, ತಂದೆಯ ಆಸ್ತಿಯಲ್ಲಿ ಸಮಪಾಲು ಬರಬೇಕೆಂದು ಕಾನೂನು ಬಲ್ಲ ಹುಡುಗಿ ಹೀಗೆ ಮೂರೂ ಸೇರಿದರೆ ಪೂರ್ವಜನ್ಮದ ಸುಕೃತ ಎನ್ನುವಂತೆ ಹಣಾಹಣಿ ನಡೆಯುತ್ತಿದೆ.

"ನಾನು ಹಿರಿಯವ, ನನ್ನ ಕೈಯಲ್ಲೇ ಹಣ ಇರಬೇಕು."

"ಅದೆಲ್ಲಾ ಕಟ್ಟಿಟ್ಟಿಡು. ನಿಂಗೆ ಎಷ್ಟು ಹಕ್ಕಿದೆಯೋ ಅಷ್ಟೇ ಹಕ್ಕು ನನಗೂ ಇದೆ. ಇದೇನು ನೀನು ಗಳಿಸಿದ್ದಲ್ಲ. ನಮ್ಮಪ್ಪಂದು ಹಣ."

"ಇಬ್ರಿಗೂ ಯಾಕೋ ಜಗಳ. ನಾನೇ ಜವಾಬ್ದಾರಿ ವಹಿಸ್ತೀನಿ ಕಣೋ ಸೀನು, ಮಧು" ಭಾವನಾ ಭಾವುಕತೆಯಿಂದ ನುಡಿದಾಗ.

"ಏಯ್, ಕೂತ್ಕೊಳ್ಳೇ ಸುಮ್ನೆ. ನೀನು ಹುಡುಗಿ. ಅಪ್ಪನ ಹಣದಲ್ಲಿ ಗಂಡು ಮಕ್ಳಿಗೇ ಹಕ್ಕು. ನಿಂಗೆ ಮದ್ವೆ ಮಾಡಿ ಮಂಗಳಾರತಿ ಮಾಡಿ ಕಳಿಸೋದಲ್ದೆ ಅಪ್ಪನ ಹಣಕ್ಕೆ ಹಕ್ಕು ಕೇಳೋಕ್ಕೆ ಬರ್ತಿದಾಳೆ." ಭಾವನಾ ಉರಿದು ಬೀಳುತ್ತಾ.



"ಲೇಯ್! ಯಾವ್ನೋನೋ ಆವನು ನನ್ನನ್ನ ಹುಡುಗಿ ಅಂತ ಕೀಳಾಗಿ ಅಂದದ್ದು? ಅಪ್ಪನ ಆಸ್ತೀಲಿ ಹೆಣ್ಣು ಮಕ್ಳಿಗೂ ಪಾಲಿದೆ ಕಣೋ? ಇನ್ನೊಂದ್ಸಲ ನನ್ನನ್ನ 'ಹುಡುಗಿ' 'ಹೆಣ್ಣು' ಅಂತ ನಿಕೃಷ್ಟವಾಗಿ ಕರೆದರೆ ಒದ್ಗಡೆ ಬೀದೀಲಿ ದಂತವೈದ್ಯರಾದ ಡಾ॥ ರಮೇಶ್ ಹತ್ರ ಓಡೋಗ ಹೋಗ್ಬೇಕಾದೀತು! ನಂದು ಕರಾಟೆ ಬೆಲ್ಟ್ ಯಾವ ಬಣ್ಣದ್ದು ಜ್ಞಾಪಕ ಇದೆಯಾ?"

"ಭರತನಾಟ್ಯ ಆಡೋ ನಾಟ್ಯ ಮಯೂರಿ ನಿನ್ನ ಬೆದರಿಕೆಗೆ ನಾನು ಬಗ್ಗೊಲ್ಲ"

"ಬಗ್ಗದೇ ಇದ್ರೆ ನಾನು ಬಗ್ಗಿಸ್ತೀನಿ ಕಣೋ" ಮಧ್ಯದವನಾದ ಮಧು ವಯಾ ಮೀಡಿಯಾ ಮಾರ್ಗ ಅನುಸರಿಸಿದ.

"ಈಗ ಜಗಳ ಬೇಡಪ್ಪಾ, ಮೂರು ಜನರು ನಾಲ್ಕುವರೆ ಸಾವಿರಾನ ಸಮನಾಗಿ ಹಂಚಿಕೊಂಡು ಬಿಡೋಣ. ಒಬ್ಬರು ದಿನಸಿ ಅಂಗಡಿ, ಇನ್ನೊಬ್ಬರು ಹಾಲು, ಪೇಪರು, ಅಪ್ಪನ ಖರ್ಚಿಗೆ ಹಣ. ಮೂರನೆಯವರು ಅಮ್ಮ, ಮನೆಗೆಲಸದವಳು ಮಾಲಿ, ಗೂರ್ಖಾ, ತರಕಾರಿ, ಹಣ್ಣು ಇತ್ಯಾದಿ ಇತ್ಯಾದಿ ಒ.ಕೆ?"

"ಓ.ಕೆ" ಎಂದು ನಗು ಮುಖದಲ್ಲೇ ಇತ್ಯರ್ಥ ಮಾಡಿಕೊಂಡು ಹಣ ಹಂಚಿಕೊಂಡರು. ಮೂರೂ ಜನ ರಕ್ತವನ್ನೇ ಹಂಚಿಕೊಂಡವರು ಇನ್ನು ಹಣವನ್ನು ಹಂಚಿಕೊಳ್ಳಲಾರರೇ? ಆದರೂ ರಕ್ತವನ್ನು ಸಮನಾಗಿ ಮೂರು ಜನ ಮಕ್ಕಳಿಗೆ ತಂದೆತಾಯಿಗಳು ಹಂಚಿರುತ್ತಾರೆ. ನಿರ್ವಂಚನೆಯ ಸೊಂಕೇ ಇಲ್ಲ. ಆದರೆ ಈಗ! ದಾಯಾದಿ ಮತ್ಸರ, 'ಹೆಣ್ಣು ಹುಡುಗಿ'—ಇನ್ನೊಬ್ಬರ ಮನೆ ಸೇರುವ ಹುಡುಗಿಯ ಬಗ್ಗೆ ಪ್ರೀತಿ, ವಿಶ್ವಾಸ ಹಂಚಿ ಎಲ್ಲರೂ ಸಮಾನರೇ ಎನ್ನಲು ಅವರಿಗೇನು ಹುಚ್ಚೇ?

* * *

ಮೂರನೆಯ ಚಿತ್ರ ಬಹಳ ದಾರುಣವಾಗಿದೆ. ತಲೆಯ ಮೇಲೆ ಕೈ ಹೊತ್ತು ಕುಳಿತಿದ್ದಾಳೆ ಜಾನಿ. ಸೋತು ಸೊರಗಿ ಹೋಗಿದೆ ಅವಳ ವದನಾರವಿಂದ. ವಾರದಿಂದ ಮೂರು ಮಕ್ಕಳೂ ನಾಪತ್ತೆ! ಕಂಪ್ಲೇಂಟ್ ಕೊಟ್ಟರೆ ಮನೆಯ ಮಾನ ಮರ್ಯಾದೆ



ಎಲ್ಲಾ ಬೀದಿಪಾಲಾಗುತ್ತೆ. ರಾಯರ ಮುಖದಲ್ಲಿ ತಮ್ಮ ಭವಿಷ್ಯ ನಿಜವಾಯಿತಲ್ಲಾ ಅಂತ ಹೆಮ್ಮೆಯ ಕಳೆ. ಅವರ ಜೀವಮಾನದಲ್ಲಿ ಇದೇ ಮೊದಲ ಬಾರಿ ಒಂದಿಷ್ಟು ಕಳೆ ಸುರೀತಾ ಇರೋದು. ಜಾನಿಯ ಬಾಯಿಯಿಂದ ಬಾಂಬು ಸಿಡಿಯುತ್ತದೆ.

"ಇದಕ್ಕೇನಾದ್ರೂ ಪರಿಹಾರ ಹುಡುಕ್ರೀ ?" ಮಕ್ಳು ಮೂವರು ಮನೆ ಬಿಟ್ಟು ಒಂದು ವಾರ ಆಯ್ತು. ಗಂಡು ಹುಡುಗ್ರಾದ್ರೆ ಪರ್ವಾಗಿಲ್ಲ. ಭಾವನಾದೇ ಯೋಚ್ನೆ ಕಂಣ್ರಿ."

"ಈ ಪರಿಹಾರ, ಅಡ್ವೈಸೂ, ಸಮಾಲೋಚನೆ ಯಾವಾಗ್ಲೂ ನೀನೇ ತಾನೇ ಮಾಡೋದು. ನಿನ್ನ ಹಾಗೆ ನಾನೇನು ಮಹಾ ಬುದ್ಧಿವಂತನಾ? ನೀನು ಮಕ್ಳು ಯಾವಾಗ್ಲೂ ಒಂದು. ಮನೆ, ಸಂಸಾರ, ಮಕ್ಳು ಅಂತ ಯಾವ್ದು ಹಚ್ಚಿಕೊಳ್ದೆ ಈಗ ನನ್ನ ಮೆದುಳು ತುಕ್ಕು ಹಿಡಿದೇ ಹೋಗಿದೆ. ಬರ್ತಾರೆ ಬಿಡು. ಕಾಸು ಖರ್ಚಾದ್ಮೇಲೆ ಇನ್ನೆಲ್ಲಿಗೆ ಹೋಗ್ತಾರೆ? ಹುಲ್ಲು ಮೇಯ್ದು ಮೇಲೆ ಕೊಟ್ಟಿಗೆ ಸೇರ್ತು ದನ ಅಂತ ಬರ್ತಾರೆ ಸುಮ್ನಿರು. ಸಂಬಳ ಕೊಟ್ಟಿಲ್ಲಾಂತ ಕೆಲಸದ ಮಾದಮ್ಮ ಚಕ್ಕರ್ರು ಗುಡ್ಸಿ, ಸಾರ್ಸಿ ಮನೇನಾದ್ರೂ ಚೊಕ್ಕಟಮಾಡು."

"ಇನ್ನೇನು ಚೊಕ್ಕಟ ಮಾಡೋದು? ಮನೆ ತಾನಾಗೇ ಕ್ಲೀನ್ ಆಗಿ ಹೋಗಿದೆ. ದಿನಸಿ ಅಂಗಡೀಗೆ ಕಾಸು ಕೊಟ್ಟು ಸಾಮಾನು ಕಳಿಸು ಅಂತ ಹೇಳದ್ರೆ ತಾನೇ ಅಡಿಗೆ ಮನೆ ಡಬ್ಬಿ ತುಂಬೋದು! ಎಲ್ಲಾ ಖಾಲಿ. ಹಾಲಿನವನಿಗೆ ಮುಂಗಡವಾಗಿ ಕೂಪನ್ ಹಣ ಕೊಟ್ರಲ್ವಾ ಹಾಲು ಸಪ್ಲೈ ಮಾಡೋದು."

"ಅದಕ್ಕೇ ನಾನು ಹೇಳಿದ್ದು, ಒಂದಿಷ್ಟು ಹಣ ಇಟ್ಕೊಂಡು ಮಿಕ್ಕಿದ್ದು ಕೊಡು ಅಂತ."

"ರೀ...ರೀ... ಸೀನು ಬರ್ತಾ ಇದಾನೆ. ಇದೇನ್ರೀ ಜಾಲಿಯಾಗಿ ವಿಸಲ್ ಹಾಕ್ತಾ ಬರ್ತಾ ಇದ್ದಾನೆ. ಇಲ್ಲಿ ನಾವು ಲಾಟ್ರಿ ಹೊಡೀತಾ ಇದೀವಿ."

"ಹಾಯ್ ಮಮ್ಮಿ! ಹಾಯ್ ಡ್ಯಾಡ್!"

"ನಿನ್ನ ಮುಖಕ್ಕೆ ಮಂಗ್ಳಾರ್ತಿ ಎತ್ತ... ಎಲ್ಲೋ ಹೋಗಿದ್ದೆ ಬೇಕೂಫಾ? ದಿನಸಿ ಅಂಗಡಿ ಹಣ ಎತ್ಕೊಂಡು ಓಡಿ ಹೋಗಿ ನಮಗೆ ಉಪವಾಸ ಹಾಕದ್ಯಲ್ಲೋ"

"ನಿಮ್ಮನ್ನ ನೋಡಿದ್ರೆ ಉಪವಾಸ ಮಾಡ್ದ ಹಾಗೆ ಕಾಣಲ್ವಲ್ಲಾ? ಅದೇನಾಯ್ತು ಅಂದ್ರೆ ಶೆಟ್ಟಿ ಅಂಗ್ಡೀಗೆ ದುಡ್ಡು ಕೊಟ್ಟು ಸಾಮಾನು ಕಳ್ಸಿ ಅಂತ ಹೇಳೋಣ ಅಂತ್ಲೇ ಹೋಗ್ತಾ ಇದ್ದೆ. ಸ್ನೇಹಿತ ಜಗ್ಗು ಸಿಕ್ದ. ಜೂನಿಯರ್ ಆರ್ಟಿಸ್ಟ್ ಹ್ಯಾಂಡಸಂ ಆಗಿರೋ ಹುಡ್ಗಬೇಕು. ನೀನು ಬರ್‍ತೀಯೇನೋ? ಬಿಂಪಾದಲ್ಲಿ ಶೂಟಿಂಗ್. ಆದ್ರೆ ಆ ಬಜೆಟ್ಗೆ ಕೊಂಚ ಕಳ್ಳೆಪುರಿ ಏಸೀಬೇಕಮ್ಮಾಂದ. ಓ.ಕೆ. ಅಂದೆ. ಒಂದೆರಡು ಜೋಡಿ ಬಟ್ಟೆ ಕೊಂಡ್ಕೊಂಡೆ. ಸಿಂಗಾಪೂರಿಗಲ್ದೆ ಇದ್ರೂ ಬಿಂಪಾಗೆ ಹೋಗಿ ಸಿನಿಮಾದಲ್ಲಿ ಭಾಗವಹಿಸಬೋದು ಅಂತ ಹೋದೆ."

"ಹಾಗಾದ್ರೆ ಸಿನಿಮಾದಲ್ಲಿ ಪಾರ್ಟ್ ಮಾಡಿದ್ದೀ ಯೇನೋ?" ಉದ್ರೇಕದಿಂದ ಕೇಳಿದ ಜಾನಿಗೆ,

"ಹೂಂ—ಮಾಡಿದ್ದೇನೆ. ಹಿರೋಯಿನ್‌ನ ಅಟಾಕ್ ಮಾಡಿ ಬೀಳಿಸುವಾಗ ಎಲ್ಲಿಂದ್ಲೋ ಹೀರೋ ಬಂದು ಸೇವ್ ಮಾಡ್ತಾನೆ. ಗುಂಪ್ನಲ್ಲಿದ್ದ ನಾನು ಅವಳ ಒಂಟಿ ಚಪ್ಲಿ ಹುಡುಕಿ ಕೈಗೆ ಕೊಡೋ ಪಾತ್ರ. ಹ...ಹ...ಹ...ಹ...ಯೇಲ್ ಖತಮ್ ...ಪೈಸೆ ಹಜಾಂ ಹೊಟ್ಟೆ ತಾಳ ಹಾಕ್ತಾ ಇದೇಮ್ಮಾ."

"ಹಸಿವಾ? ಮಗನೆ! ಹೋಗೋ. ಇನ್ನೊಂದು ಚಪ್ಲೀನೂ ಹುಡುಕಿ ಆ ಹಿರೋಯಿನ್ ಕೈಗೆ ಕೊಟ್ಟು ಕೆನ್ನೆಗೆ ಅದ್ರಿಂದ್ಲೇ ನಾಲ್ಕು ತಟ್ಟಿಸ್ಕೊಂಡು ಬಾ."

"ಅಲ್ನೋಡ್ರೀ. ಎರಡನೆಯ ಅವತಾರ ಪ್ರತ್ಯಕ್ಷವಾಗ್ತಾ ಇದೆ. ಇವನದೇ ಇನ್ನೇನು ಕತೇನೋ ಕೇಳೋಣ."

"ಏನಪ್ಪಾ, ಎಲ್ರೂ ಮಾತಾಡ್ಕೊಂಡು ಒಬ್ಬೊಬ್ರಾಗಿ ಬರ್ತಾ ಇದೀರಾ? ಇನ್ನು ಎರಡನೇ ಅಧ್ಯಾಯ ಶುರು ಮಾಡು, ಹಣ ಏನ್ಮಾಡ್ದೆ? ಹಾಲಿಗೆ ಹಣ ಕೊಡ್ದೆ ಇದ್ರೂ ನಮ್ಮ ಹೊಟ್ಟೆಗೆ ಹಾಲಾಹಲ ಹಾಕಿದ ಪುಣ್ಯಾತ್ಮಾ ನಿನಗೆ. ಬೊಗಳೀ ಏನೋ ಮಾಡ್ದೆ ಹಣಾನ?" ಜಾನಿ ಹಾಲಾಹಲ ಉಗುಳಿದಳು.

'ಹಾಲಿನ ಬೂತಿನ ಹತ್ರ ಹಣ ಕೊಟ್ಟು ಅಡ್ವಾನ್ಸ್ ಕೂಪನ್ ಖರೀದಿ ಮಾಡೋಣಾಂತ ಹೋದ್ನಾ. ನನ್ನ ಕ್ಲಾಸ್‌ಮೇಟ್ ಯುವಕನ ಸಿಕ್ದ. 'ಇದೇನೋ, ಅಪರೂಪಕ್ಕೆ ಹಾಲಿನ ಬೂತ ಹತ್ರ?' ಅಂದ ಮನೇಲಿ ನಡೆದದ್ದು ಹಾಗೂ ಸಂಸಾರದ ಹೊಣೆ, ಖರ್ಚು, ಉಳಿತಾಯ, ಮೊಪೆಡ್ ಬಗ್ಗೆ ಹೇಳ್ದೆ. ಅವನು ಅಬ್ಬರದಿಂದ ನಗ್ತಾ.

"ಅಯ್ಯೋ ಹುಚ್ಚು ಶಿಖಾಮಣಿ! ಇವತ್ತೆಲ್ಲಾ ತಿಪ್ಪರಲಾಗ ಹಾಕಿದ್ರೂ ತಿರುಪೆ ಕಾಸು ತರದ ಉಳಿತಾಯ ಮಾಡಿ, ನೀನು ನಿನ್ನ ಕಾಲ್ದಲ್ಲಿ ಮೊಪೆಡ್ ಕೊಂಡ್ಕೊಳ್ಳೋ ಇದ್ರೂ ನಿನ್ನ ಮೊಮ್ಮಗನ ಕಾಲಕ್ಕೆ ಆಗ್ಬೋದು. ನಾನೊಂದು ಉಪಾಯ ಹೇಳ್ಕೊಡ್ತೀನಿ ಕೇಳು. ಚಿಟಿಕೆ ಹೊಡೆಯೋದ್ರಲ್ಲಿ ಲಕ್ಷಾಧಿಪತಿ ಆಗ್ತೀಯ ಅದೃಷ್ಟ ಇದ್ರೆ, ಅಂತ ಪೂನಾ ರೇಸ್‌ಗೆ ಕರ್ಕೊಂಡು ಹೋದ. ನಾನು ಬೆಟ್ ಮಾಡಿದ ಕುದುರೆ ಕತ್ತೆ ತರಹಾನೂ ಓಡ್ಲಿಲ್ಲಾಮ್ಮಾ. ಅವನ ಕೈಯಲ್ಲೇ 6 ನೂರು ಸಾಲಮಾಡಿ ಇದೀಗ ಊರು ಸೇರ್ತಾ ಇದೀನಿ. ಈಗ ಬರ್ತಾನೆ ಸಾಲ ವಸೂಲ್ ಮಾಡೋಕ್ಕೆ."

"ಓಹೋ ಗಡ್ಡಕ್ಕೆ ಬೇರೆ ಸೀಗೇಕಾಯಿ ಅಂತ ಈ ಸಾಲದ ಹೊರೆ ಬೇರೇನೋ. ಇಲ್ನೋಡಿ ಕುದುರೆ ಲಾಯಬಳ್ದು ಹಣತೀರ್ಸು. ನಂಗೂ ಇದಕ್ಕೂ ಸಂಬಂಧ ಇಲ್ಲ. ಆ ಕುದುರೆ ಲದ್ದಿ ಗೋಣಿಯಲ್ಲಿ ತುಂಬಿ ಬೀದಿ ಬೀದೀಲಿ ಗೊಬ್ರು ನಾದ್ರೂ ಮಾರು. ಮೂರು ಕಾಸು ಸಹ ನಮ್ಮ ಹತ್ರ ಇಲ್ಲ" ರಾಯರು ಮೆಲುದನಿಯಲ್ಲಿ.

'ಮೊಪೆಡ್ ಯಾಕೆ? ಇಂಪಾಲಾನೇ ಇಂಪೋರ್ಟ್ ಮಾಡ್ಕೋಬೋದು' ಅನ್ನೋ ದೂರದೃಷ್ಟಿ ಹುಡುಗಂಗೆ.

"ಓಹೋ ನಮ್ಮ ತರಹ ಬೇಸ್ತು ಬಿದ್ದ ಮೂರನೇ ರೇಸು ಇದೇನು ಕಾರ್‍ನಲ್ಲಿ ಇಳೀತಾ ಇದ್ದಾಳೆ. ಜೊತೇಲಿ ಸುಂದರ ನವಯುವಕ!" ಜಾನಿ ಉದ್ವಿಗ್ನಳಾಗಿ.

"ಇದೇ ನಮ್ಮ ಭಾವನ, ಒಂದು ವಾರದಿಂದ ಎಲ್ಲಿ ಹೊರಟುಹೋದೆ? ಹೆಣ್ಣು ಹುಡ್ಗಿ ಹೀಗೆ..."

"ಅಮ್ಮಾ, ಹೆಣ್ಣು ಹುಡ್ಗಿ ಹೆಣ್ಣು ಹುಡ್ಗಿ ಅಂತ ಇನ್ನೊಂದ್ಸಲಿ ಅನ್ಬೇಡಮ್ಮಾ."

"ವಿಷಯ ತಿಳಿದ್ರೆ ನಿನ್ನನ್ನ ಅದ್ಯಾರೆ ಕುತ್ಗೇಗೆ ಕಟ್ಕೊಳ್ತಾರೆ?" ಹುಡುಗ ಸಮಾಧಾನದಿಂದ.

"ಬೇರೆ ಯಾರೂ ಕಟ್ಕೊಳ್ಳೋದು, ಕಟ್ಬೋದ ಬೇಡ ಆಂಟಿ. ನಾನಾಗ್ಲೇ ಭಾವನಾ ಕುತ್ಗೇಗೆ ತಾಳಿ ಕಟ್ಟಾಯ್ತು".

"ಆಂ! ಇದೇನೇ ಸಿನೆಮಾ ಕತೆ ತರಹ!"

"ನಡೆದದ್ದು ಇಷ್ಟೆ ಆಂಟಿ. ಇವಳು ಮಾರ್ಕೆಟ್ ಹತ್ರ ಬರ್ತಾ ಇದ್ಲಂತೆ. ನಮ್ಮ ತಂದೆ ಔಷಧಿ ಅಂಗಡಿ ಇಳಿತಾ ಇದ್ದೋರೇ "ಅಯ್ಯೋ ಪಿಕ್-ಪಾಕೆಟ್ ಆಗೋಯ್ತು" ಅಂತ ಚೀರಿದರಂತೆ. ಇವಳು ಒಬ್ಬ ಪಡ್ಡೆ ಹುಡುಗ ತಂದೆ ಅವರನ್ನ ಕಾರಿನಿಂದ ಹಿಂಬಾಲಿಸ್ತಾ ಇದ್ದದ್ದು ನೋಡ್ತಾ ಇದ್ದವಳು ಪಿ ಟಿ ಉಷಾ ತರಹ ಓಡಿ ಅವನನ್ನ ಟಾಂಗ್‌ಕೊಟ್ಟು ಉರುಳಿಸಿ ಕರಾಟೆ ಪಟ್ಟೆಲ್ಲಾ ಪ್ರಯೋಗ ಮಾಡಿ ಹಣ್ಣುಗಾಯಿ ನೀರುಗಾಯಿ ಮಾಡಿ ತಂದೆಯವರ ಪಾಕೆಟ್ ವಾಪಸ್ಸು ಮಾಡದ್ಲು. ತಂದೆಯವರೇ ಇವಳನ್ನ ಕಾರಲ್ಲಿ

# ಅಪರೂಪದ ಅವಳಿಗಳು

## ರೂಪಾ–ದೀಪಾ



ಜಗತ್ತಿನಲ್ಲಿ ಅವಳಿಗಳು ಅಪರೂಪ. ಅದರಲ್ಲೂ ಪ್ರತಿಭಾವಂತರಾದ ಅವಳಿ ಸಹೋದರಿಯರು ಅತಿ ಅಪರೂಪವೆಂದೇ ಹೇಳಬೇಕು. ಆದ್ದರಿಂದಲೇ ಕರ್ನಾಟಕದ ಸಾಂಸ್ಕೃತಿಕ ಕೇಂದ್ರ ಸ್ಥಳವಾದ ಶಿವಮೊಗ್ಗಾದ ಸಂಗೀತ ಪ್ರೇಮಿಗಳನ್ನು "ಮಧುರ ಕಂಠದ ಅವಳಿ ಸೋದರಿಯರು ಯಾರು ?" ಎಂದರೆ ಖಂಡಿತವಾಗಿ ಅದಕ್ಕೆ ಉತ್ತರ ರೂಪಾ-ದೀಪಾ ! ಕಾಸರವಳ್ಳಿ ಸಹೋದರಿಯರೆಂದು ಹೆಸರಾದ ರೂಪಾ-ದೀಪಾ. ತಮ್ಮ ಪದವಿಯನ್ನು ಮುಗಿಸಿ ಈಗ ಮದ್ರಾಸಿನಲ್ಲಿ ಸ್ನಾತಕೋತ್ತರ ಅಧ್ಯಯನ ಮಾಡುತ್ತಿರುವ ಯುವತಿಯರು.

ನಗರದ ಖ್ಯಾತ ಶರಾವತಿ ನರ್ಸಿಂಗ್ ಹೋಮ್‌ನ ಪಾಲುದಾರರಾದ ಡಾಕ್ಟರ್ ಭಾಸ್ಕರ್ ರವರ ಪುತ್ರಿಯರಾದ ರೂಪಾ-ದೀಪಾ ರವರ ಸಂಗೀತ ಪ್ರೇಮ-ಪ್ರತಿಭೆ ಅವರ ತಂದೆ-ತಾಯಿ ಅಜ್ಜಿಯರಿಂದ ರಕ್ತಗತವಾಗಿ ಬಂದದ್ದು. ಡಾ॥ ಭಾಸ್ಕರ್ ಸ್ವತಃ ಒಳ್ಳೆಯ ಗಾಯಕರಾಗಿದ್ದು ಶಿವಮೊಗ್ಗ ವೈದ್ಯ ವೃಂದದಲ್ಲಿ "ಮುಖೇಶ್" ಎಂದೇ ಪ್ರಸಿದ್ಧರು. ಹಾಗೇ ಶ್ರೀಮತಿ ಶಕುಂತಲಾ-ಭಾಸ್ಕರ್ ಒಳ್ಳೆಯ ಸಂಗೀತಜ್ಞಾನ ಹೊಂದಿದ್ದು ಭದ್ರಾವತಿ ಆಕಾಶವಾಣಿಯಲ್ಲಿ ಆಗಾಗ ಅವರ ಮಧುರ ಕಂಠ ತೇಲಿ ಬರುತ್ತದೆ. ರೂಪಾ-ದೀಪಾರ ಅಜ್ಜಿ (ತಾಯಿಯ ತಾಯಿ) ದಿ. ಕುತ್ತೆತ್ತೂರು ರಮಾದೇವಿಯವರು ಮದರಾಸಿನ ಸೆಂಟ್ರಲ್ ಕಾಲೇಜ್ ಆಫ್ ಕರ್ನಾಟಕದ ಮ್ಯೂಸಿಕ್‌ದಲ್ಲಿ ಶ್ರೀ ಮುಸರಿ ಸುಬ್ರಮಣ್ಯ ಅಯ್ಯರ್ ರವರ ಶಿಷ್ಯರಾಗಿದ್ದು ಸುವರ್ಣಪದಕ ಪಡೆದಿದ್ದರಂತೆ. ಹಾಡುಗಾರಿಕೆ, ವೀಣಾವಾದನದಲ್ಲಿ ವಿದ್ವತ್ ಪಡೆದಿದ್ದ ರಮಾದೇವಿ ಬೆಂಗಳೂರು ಆಕಾಶವಾಣಿಯಲ್ಲಿ ವೀಣೆ ಮತ್ತು ಹಾಡುಗಾರಿಕೆಯಲ್ಲಿ 'ಎ' ಗ್ರೇಡ್ ಕಲಾವಿದರಾಗಿದ್ದವರು.

ಈ ಓಸ್ನೆಲೆಯಿರುವ ರೂಪಾ-ದೀಪಾ ಸಹಜವಾಗಿಯೇ ಸಂಗೀತದತ್ತ ಒಲಿದಿದ್ದರಲ್ಲಿ ಆಶ್ಚರ್ಯವೇ ಇಲ್ಲ. ಹಾಗಾಗಿ ಚಿಕ್ಕ ವಯಸ್ಸಿನಲ್ಲಿಯೇ ಈ ಅವಳಿ ಸಹೋದರಿಯರು ಶ್ರೀ ಮಧೂರು ಪಿ. ಬಾಲ-ಸುಬ್ರಮಣ್ಯಂರವರಿಂದ ಪ್ರಾಥಮಿಕ ಸಂಗೀತ ಕಲಿತು 1984 ರಲ್ಲಿ ಕರ್ನಾಟಕ ಸೆಕೆಂಡರಿ ಬೋರ್ಡಿನ ಜ್ಯೂನಿಯರ್ ಪರೀಕ್ಷೆಯಲ್ಲಿ ಮೊದಲ ದರ್ಜೆಯಲ್ಲಿ ತೇರ್ಗಡೆಯಾದರು. ನಂತರ ಶಿವಮೊಗ್ಗದ ಪ್ರಖ್ಯಾತ ಸಂಗೀತಗಾರರಾದ ಶ್ರೀ ವೈ. ಕೆ. ಶ್ರೀಕಂಠಯ್ಯನವರು ಈ ಸೋದರಿಯರಿಗೆ ಮಾರ್ಗದರ್ಶನ ನೀಡಿ ತಮ್ಮ ಹಲವು ಕೀರ್ತನೆಗಳನ್ನು ಕಲಿಸಿದರು. ನಂತರ ಭದ್ರಾವತಿಯ ವಿದ್ವಾನ್ ಶ್ರೀ ಕೆ. ಜಿ. ರಾಮಸ್ವಾಮಿಯವರ ಮಾರ್ಗದರ್ಶನದಲ್ಲಿ 1986 ರಲ್ಲಿ ಸೀನಿಯರ್ ಸಂಗೀತ ಪರೀಕ್ಷೆಯಲ್ಲಿ ಮೊದಲನೇ ದರ್ಜೆಯಲ್ಲಿ ತೇರ್ಗಡೆ ಹೊಂದಿದರು. ಇದೇ ಸಮಯದಲ್ಲಿ ಶ್ರೀಮತಿ ಜಯಲಕ್ಷ್ಮಿಯವರಲ್ಲಿ ವೀಣೆಯನ್ನೂ ಕಲಿತು ಜ್ಯೂನಿಯರ್ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಪಾಸಾದರು. ತಮ್ಮ ವಿದ್ಯಾಭ್ಯಾಸದಲ್ಲೂ ಹಿಂದೆ ಬೀಳದೇ ರೂಪಾ ದ್ವಿತೀಯ ಪಿ. ಯು. ಸಿ. ಯಲ್ಲಿ 10 ನೇ ರ್‍ಯಾಂಕ್ ಗಳಿಸಿದರೆ, ದೀಪಾ ಒಂದೇ ಅಂಕದಿಂದ ರ್‍ಯಾಂಕ್ ವಂಚಿತರಾದರು.

ನಂತರ ತಮ್ಮ ಪದವಿಗಾಗಿ ಬೆಂಗಳೂರಿನ ಎನ್. ಎಮ್. ಕೆ. ಆರ್. ವಿ. ಕಾಲೇಜಿಗೆ ಸೇರಿದರು. ಜೊತೆಯಲ್ಲಿ ಬೆಂಗಳೂರಿನ ಪ್ರಖ್ಯಾತ ಸಂಗೀತ ವಿದುಷಿ ಶ್ರೀಮತಿ ಸೀತಾಲಕ್ಷ್ಮಿ ವೆಂಕ-ಟೇಶನ್ ಅವರಲ್ಲಿ ಸಂಗೀತಾಭ್ಯಾಸವನ್ನು ಮುಂದುವರಿಸಿದರು. ಈ ಮೂರು ವರ್ಷಗಳಲ್ಲಿ ಬೆಂಗಳೂರು ಶಿವಮೊಗ್ಗ ಗಳಲ್ಲಿ ಹಲವಾರು ಕಾರ್ಯಕ್ರಮ ನೀಡುತ್ತ, ಕಲಿತ ಕಾಲೇಜಿಗೆ ಹಲವಾರು ಪಾರಿತೋಷಕ ಗಳಿಸಿಕೊಟ್ಟಿದ್ದಾರೆ. ಮನಶ್ಶಾಸ್ತ್ರವನ್ನು ತಮ್ಮ ಬಿ. ಎ. ಪದವಿಗೆ ಆರಿಸಿಕೊಂಡು ಪ್ರಥಮ ವರ್ಗದಲ್ಲಿ ಪಾಸಾಗಿದ್ದಾರೆ.

ಅಂತರ ಕಾಲೇಜು ಮಟ್ಟದಲ್ಲಿ ಸಂಗೀತ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಪಡೆದು 'ಕಲಾ ಭಾರತಿ' ಪಾರಿತೋಷಕ ಪಡೆದಿದ್ದಾರೆ. ಬೆಂಗಳೂರು ವಿಶ್ವ ವಿದ್ಯಾಲಯದ ರಾಜ್ಯಮಟ್ಟದ ಸಂಗೀತ ಸ್ಪರ್ಧೆಯಲ್ಲಿಯೂ ಪ್ರಥಮಸ್ಥಾನ ಪಡೆದ ಕೀರ್ತಿ ಇವರದು. ಈವರೆಗೆ ಇವರು ನೀಡಿರುವ ಕಾರ್ಯಕ್ರಮಗಳು ಹಲವಾರು. ಭದ್ರಾವತಿ ಆಕಾಶವಾಣಿ ನಿಲಯದ "ಲೈಟ್ ಕ್ಲಾಸಿಕಲ್" ವಿಭಾಗದಲ್ಲಿ "ಬಿ" ಹೈಗ್ರೇಡ್‌ನಲ್ಲಿ ಆಯ್ಕೆಯಾಗಿ ಆಗಾಗ ಇವರ ಭಾವಗೀತೆಗಳು ಆಕಾಶವಾಣಿಯಲ್ಲಿ ಪ್ರಸಾರವಾಗುತ್ತಿವೆ.

ಈಗ ಮನಶ್ಶಾಸ್ತ್ರದಲ್ಲಿ ಎಮ್. ಎ. ಪದವಿ ಪಡೆಯಲು ಮದ್ರಾಸಿನಲ್ಲಿರುವ ರೂಪಾ-ದೀಪಾ ಸಂಗೀತದಲ್ಲಿ ಹೆಚ್ಚಿನ ಪರಿಣತಿ ಪಡೆಯಲು ಪದ್ಮಶ್ರೀ ಲಾಲ್‌ಗುಡಿ ಜಯರಾಮನ್ ಅವರ ಶಿಷ್ಯೆಯರಾಗಿದ್ದಾರೆ.

ರೂಪದಲ್ಲಿ ರೂಪಾ ಯಾರು ? ದೀಪಾ ಯಾರು ? ಎಂದು ಅಪರಿಚಿತರಿಗೆ ತಿಳಿಯುವದು ಕಷ್ಟ. ಹಾಗೆ ಅವರ ಮಧುರಕಂಠಗಳು ಜೋಡಿಯಾಗಿ ಕೇಳಿದಾಗ ಒಂದೇ ಸ್ವರವೆನ್ನುವಷ್ಟು ಸಾದೃಶ್ಯ.

—ವಿಜಯಾ ಶ್ರೀಧರ್

---

ಕರ್‍ಕೊಂಡು ಬಂದ್ರು. ನಂಗೆ ತಾಯಿ ಇಲ್ಲ. ಒಬ್ನೆ ಮಗ ನಾನು."

"ಓಹೋ ! ಇದೂ ಸಿನೆಮಾ ಕತೆ ಸನ್ನಿವೇಶಾನ್ನಿ" ವ್ಯಂಗ್ಯದಿಂದ ಖಾರ ಕುಕ್ಕಿದ ಸೀನು. ಹುಡುಗ ಹೇಳ್ದ.

"ಮೊದ್ಲಿಂದ್ಲೂ ನಮ್ಮ ಮನೆಗೆ ಧೈರ್ಯವಂತ ಹುಡ್ಗಿ ತರ್‍ಬೇಕು ಅಂತ ನಮ್ಮ ತಂದೆ ಇಷ್ಟ. ಏಕೆಂದ್ರೆ ನಮ್ಮ ತಾಯಿ ದೇವಸ್ಥಾನದಿಂದ ಬರ್‍ತಾ ಯಾವೋನೋ ಚೈನ್ ಕತ್ತರ್‍ಸಿ ಎಳ್ಕೊಂಡು ಹೋದ. ಅದೇ ಷಾಕಲ್ಲೇ ಮೊದ್ಲೇ ವೀಕ್ ಹಾರ್ಟ್ ಇದ್ದ ತಾಯಿ ಹೋಗ್ಬಿಟ್ರು. ಹೆಣ್ಮಕ್ಳು ಯಾವಾಗ್ಲೂ ತಮ್ಮನ್ನ ತಾವು ಆತ್ಮರಕ್ಷಣೆ ಮಾಡ್ಕೊಳ್ಳೋ ತಾಕತ್ತು ಇರ್‍ಬೇಕು ಅನ್ನೋವಾದ... ಇನ್ನು ಎಲ್ಲಾ ಸಿನೆಮಾ ರೀಲೇ ಆಗ್ಹೋಯ್ತು."

"ಹೌದಮ್ಮಾ, ಇವರೂ ನನ್ನನ್ನ ಒಪ್ಪಿದ್ರು. ನಾನೂ ಒಪ್ದೆ. ವರದಕ್ಷಿಣೆ ಇಲ್ದೆ ಮದ್ವೆ. ಮನೆ ದೇವರು ತಿರುಪತಿ ದರ್ಶನ ಮಾಡಿ ಬರ್‍ತಾ ಇದ್ದೀವಿ. ಇದೋ ಪ್ರಸಾದ. ಜೊತೆಗೆ ನಾನು ತೊಗೊಂಡು ಹೋಗಿದ್ದ ಒಂದೂವರೆ ಸಾವಿರ ರೂಪಾಯಿ !"

"ಅಲ್ಲಾ, ನಮಗೊಂದು ಮಾತು ತಿಳಿಸ್ಬಾರದಿತ್ತೆ ?"

"ಸದ್ಯ ! ಮಗೂನ್ನೂ ಎತ್ಕೊಂಡು ಬರ್‍ಲಿಲ್ವಲ್ಲಾ. ಅಷ್ಟೇಸಾಕು" ವಿಷಕಾರಿದ ಮಧು.

"ಮುಚ್ಕೋ ಬಾಯಿ ಸಾಕು. ನಿಮ್ಮ ಯೋಗ್ಯತೆಗೆ ಇಷ್ಟು ಬೆಂಕಿ ಹಾಕ. ಒಬ್ಬ ಹಿರೋಯಿನ್ ಚಪ್ಲಿ ಮುಟ್ಟೆ ಒಂದೂವರೆ ಸಾವಿರ, ಇನ್ನೊಬ್ಬ ಕುದುರೆ ಲದ್ದೀಗೆ ಒಂದೂವರೆ ಸಾವಿರ-ಬಡ್ಡಿ ಆರು ನೂರು ಬೇರೆ. ಇವಳೇ ವಾಸಿ. ನಮಗೆ ಹಣಾನೂ ವಾಪಸ್ಸು-ಅವಳಿಗೆ ಗಂಡಾನೂ ಸಿಕ್ತ. ಇನ್ಮೇಲೆ ಏನಾದ್ರೂ ಹಣ ಕೇಳಿದ್ರೆ ನೋಡು ಹೂತಾಕ್ಬಿಡ್ತೀನಿ."

* * * * *

# ಕೇಶಾಲಂಕಾರ


1

## ವಧುವಿನ ಕೇಶಾಲಂಕಾರ

ಚಿತ್ರ (1) ರಲ್ಲಿ ತೋರಿಸಿರುವಂತೆ ಕೇಶವನ್ನು ಬಾಚಿ ರಬ್ಬರ್ ಬ್ಯಾಂಡ್ ಹಾಕಿಕೊಳ್ಳಬೇಕು. ನಂತರ ಅದನ್ನು 5 ಭಾಗಗಳಾಗಿ ಮಾಡಿಕೊಂಡು 2ನೇ ಚಿತ್ರದಲ್ಲಿ ತೋರಿಸಿರುವಂತೆ ಸುರಳಿಯಾಗಿ ಸುತ್ತಿ ಪಿನ್ನನ್ನು ಹಾಕಿರಿ. ಅದೇ ರೀತಿ ಉಳಿದ 4 ಭಾಗಗಳನ್ನು ಸುರಳಿಯಾಗಿ ಸುತ್ತಿ ಪಿನ್ನನ್ನು ಹಾಕಬೇಕು. 4ನೇ ಭಾಗದ ಕೂದಲಿನಲ್ಲಿ ಸ್ವಲ್ಪ ಭಾಗವನ್ನು ಬಿಟ್ಟು ಉಳಿದುದನ್ನು ಸುರುಳಿಯಾಗಿ ಸುತ್ತಿ ಪಿನ್ನನ್ನು ಮಾಡಿ ಸ್ವಲ್ಪ ಭಾಗದ ಕೂದಲನ್ನು 2 ಭಾಗಗಳನ್ನಾಗಿ ಮಾಡಿ ಜಡೆ ಹೆಣೆದು ಆ ಸುರುಳಿಗಳ ಎರಡೂಕಡೆಯೂ ಬರುವಂತೆ ಸುತ್ತಿ ಪಿನ್ ಮಾಡಿ. ನಂತರ ಆ ಜಡೆಯ ಮೇಲೆ ಮುತ್ತುಗಳಿಂದ ಅಲಂಕರಿಸಿ.

—ಗಾಯತ್ರಿ ಎಸ್. ಕುಮಾರ್,
ಜಯಶ್ರೀ ಶ್ರೀಧರ್

ಚಿತ್ರಗಳು: ಡಿ. ಸಿ. ನಾಗೇಶ್


2


3



## ‘ಕಥೆಗೊಂದು ಚಿತ್ರ’ ಶೀರ್ಷಿಕೆಯಲ್ಲಿ ಆಯ್ಕೆಯಾದ 3 ಕಥೆಗಳು

### ಪುನರ್ಜನ್ಮ

ಆತ ಅವಸರದಲ್ಲಿದ್ದ ಅರ್ಧ ಲಕ್ಷ ಸಿಕ್ಕಿತ್ತು. ಇನ್ನರ್ಧ ಲಕ್ಷ ಕೆಲಸವಾಗುತ್ತಲೇ ಸಿಗಲಿತ್ತು. ಹಾಗೆ ನೋಡಿದರೆ ಆತ ಪ್ರೊಫೆಷನಲ್ ಏನೂ ಅಲ್ಲ. ಮೊದಲ ಬಾರಿಗೆ ಆತ ಈ ಕೆಲಸವನ್ನು ಹಿಡಿದಿದ್ದ. ಆಮಿಷ ತೋರಿಸಿದವರು ಆತನ ಪರಿಚಿತರೇ ಆಗಿದ್ದರು. ಆತನ ನಿರುದ್ಯೋಗ ಅವನನ್ನು ಅಸಹಾಯಕನನ್ನಾಗಿಸಿತ್ತು.

ಅಲ್ಲದೇ ಒಂದು ಲಕ್ಷವೆಂದರೆ ಕಡಿಮೆಯೇನಲ್ಲ. ಅಷ್ಟು ಹಣದಿಂದ ಜೀವನವಿಡೀ ಸುಗಮವಾಗಿ ಸಾಗಿಸಬಹುದು. ತನ್ನನ್ನೇ ನಂಬಿ ಕುಳಿತ ತಂಗಿಯ ಮದುವೆ ಬೇರೆ ಇದೆ. ಐವತ್ತು ಸಾವಿರದಿಂದ ಮದುವೆ ಮುಗಿಸಿದರೂ, ಇನ್ನೈವತ್ತು ಸಾವಿರವನ್ನು ಬಿಜಿನೆಸ್‌ಗೆ ಹಾಕಬಹುದು. ಇದೇ ವಿಚಾರದಿಂದ ಈ ಘೋರ್ಖಿ ಕೆಲಸಕ್ಕೆ ಒಪ್ಪಿಕೊಳ್ಳುವ ಮುಟ್ಠಾಳತನವನ್ನು ಆತ ಮಾಡಿದ್ದ.

ಮುದುಕರ ಹೆಸರು-ಪರಿಚಯ ಆತನಿಗೆ ತಿಳಿದಿರಲಿಲ್ಲ. ಅಥವಾ ಆ ಮುದುಕರ ಅಪರಾಧವಾದರೂ ಏನೆಂದು ತಿಳಿಯನು. ಆತನ ಕೆಲಸ ಇಷ್ಟೇ. ಆ ಮುದುಕರನ್ನು ಹಿಂಬಾಲಿಸಿ ಹೋಗಿ, ತಕ್ಕ ಸಮಯ-ಸಂದರ್ಭ ನೋಡಿ ಗುಂಡಿಕ್ಕುವುದು. ಕಾಣಲೇನೋ ಇದು ಸುಲಭವೆನ್ನಿಸಬಹುದು. ಆದರೆ ತಿಳಿದಷ್ಟು ಸುಲಭವಾಗಿರಲಿಲ್ಲ. ಪಿಸ್ತೂಲನ್ನು ಅವರೇ ಒದಗಿಸಿದ್ದರು.

ಆದರೆ ಸಂದರ್ಭವನ್ನು ಇವನೇ ಹುಡುಕಿಕೊಳ್ಳಬೇಕಾಗಿತ್ತು. ಧೈರ್ಯವೇನೋ ಇತ್ತು. ಆದರೂ ಮೊದಲ ಬಾರಿಗೆ ಹೀಗೊಂದು ಕಾರ್ಯವನ್ನು ಕೈಗೆತ್ತಿಕೊಂಡದ್ದರಿಂದ ಮನದ ಯಾವುದೋ ಮೂಲೆಯಲ್ಲಿ ಅಳುಕು ತುಂಬಿತ್ತು.

ಮುದುಕರು ಸಮಾಜಸೇವಕರಿದ್ದಂತೆ ಕಂಡುಬಂತು. ಅವರಿಗೆ ತಿಳಿಯದಂತೆ, ಅವರನ್ನು ಅನುಸರಿಸುತ್ತಿದ್ದಾಗ, ಆತನಿಗೆ ಜನರು ಭಯ-ಭಕ್ತಿಯಿಂದ ನಮಸ್ಕರಿಸಿ, ಗೌರವ ತೋರುವುದನ್ನು ಕಂಡು ಅಚ್ಚರಿಯಾಗಿತ್ತು. ಆದರೂ ಆತನಿಗೆ ಅವರ ಚರಿತ್ರೆಯೇನೂ ಬೇಕಿರಲಿಲ್ಲ. ಕೇವಲ ವಹಿಸಿದ ಕಾರ್ಯವನ್ನು ಕರಾರುವಾಕ್ಕಾಗಿ ಮಾಡಿ ಮುಗಿಸುವುದಷ್ಟೇ ಆತನ ಧ್ಯೇಯವಾಗಿತ್ತು. ಮುಂದಿನದನ್ನು ಕೆಲಸ ವಹಿಸಿದವರೇ ನೋಡಿಕೊಳ್ಳುತ್ತಾರೆ.

ಕೊನೆಗೂ ಆ ಅವಕಾಶ ದೊರೆತಿತ್ತು. ಮುದುಕರು ಯಾವದೋ ರಸ್ತೆಯಲ್ಲಿ ಕಾರಿನಿಂದ ಇಳಿಯುತ್ತಿದ್ದರು. ಹಿಂಬಾಲಿಸಿ ಬಂದ ಆತ ತುಂಬಿದ ಪಿಸ್ತೂಲು ಹಿಡಿದು ಅವರ ಮುಂದೆ ಹಾರಿ ಬಂದ. ನಾಲ್ಕು ರಸ್ತೆಗಳು ಕೂಡುವ ಆ ಜಾಗದಲ್ಲಿ ನಿಂತು ಟ್ರಿಗರ್‌ನ್ನು ಅದುಮುವ ಮೊದಲೇ ಎಲ್ಲಿಂದಲೋ ತೂರಿ ಬಂದ ಕಾರೊಂದು ಅವನಿಗೆ ಢಿಕ್ಕಿ ಹೊಡೆದಿತ್ತು. ಬಂದಂತೆಯೇ ಅದೃಶ್ಯವೂ ಆಗಿತ್ತು. ಆತ ರಕ್ತದ ಮಡುವಿನಲ್ಲಿ ಬಿದ್ದು ಒದ್ದಾಡುತ್ತಿದ್ದ. ಅದೇ ಮುದುಕರು ಸಹಾಯಕ್ಕಾಗಿ ಧಾವಿಸಿ ಬಂದರು. ಯಾವುದನ್ನೂ ಲೆಕ್ಕಿಸದೇ ತಮ್ಮದೇ ಕಾರಿನಲ್ಲಿ ಅವನನ್ನು ಕರೆದೊಯ್ದು ನರ್ಸಿಂಗ್ ಹೋಮ್ ಸೇರಿಸಿದ್ದರು. ವಾರ್ಡ್‌ಬಾಯ್‌ನಿಂದ ಹಿಡಿದು, ಸರ್ಜನ್ನರುಗಳವರೆಗೆ ಎಲ್ಲರೂ ಆ ಮುದುಕರ ಒಂದು ಸನ್ನೆಗೆ ಕೈ ಕೈಕಟ್ಟಿ, ತಲೆಬಾಗಿಸಿ ನಡೆದುಕೊಳ್ಳುತ್ತಿದ್ದುದರಿಂದ ಯಾವ ಕಷ್ಟವೂ ಇಲ್ಲದೇ, ಆತನ ಆಪರೇಶನ್ನು ನಡೆಯಿತು. ಜೀವ ಉಳಿಸಲು ಬೇಕಾದ ರಕ್ತದ ಪೂರೈಕೆ ನಡೆಯಿತು. ಅತ್ಯುತ್ತಮವಾದ ಮೆಡಿಕಲ್ ಟ್ರೀಟ್‌ಮೆಂಟ್ ದೊರೆಯಿತು.

ಮನಸ್ಸು ಮಾಡಿದ್ದರೆ ಅವರು ಆತನನ್ನು ಪೋಲೀಸಿಗೆ ಒಪ್ಪಿಸಬಹುದಿತ್ತು. ಆದರೆ ಮುದುಕರ ಮಹಾನ್ ವ್ಯಕ್ತಿತ್ವದ ಮುಂದೆ ಆತ ಕುಬ್ಜನಾಗಿ ನಿಂತಿದ್ದ. ಅವರ ಕಾಲು ಹಿಡಿದು ಕಣ್ಣೀರಿಟ್ಟಿದ್ದ. "ಹಣವನ್ನು ಇಸಿದುಕೊಂಡಾದರೂ ಸರಿ, ಒಳ್ಳೆಯ ಕೆಲಸ ಮಾತ್ರ ಮಾಡು" ಎಂದಂದ ಅವರ ಕೈಯಿಂದ ಪುನರ್ಜನ್ಮ ಪಡೆದಿದ್ದ.

— **ಸಮರ್ಪಿತಾ**

* * *

## ವನಿತಾ

**ಕಥೆಗೊಂದು ಚಿತ್ರ** ವಿಭಾಗಕ್ಕೆ ಬರುತ್ತಿರುವ ಕಥೆಗಳು ಅನೇಕವು ಉತ್ತಮವಿದ್ದರೂ—ಪ್ರಕಟಸಲಾಗಿರುವ ಚಿತ್ರಕ್ಕೆ ಪೂರ್ತಿಯಾಗಿ ಪೂರಕನಾಗಿರುವುದಿಲ್ಲ. ಹೀಗಾಗಿ ಒಳ್ಳೆಯ ಕಥೆಗಳನ್ನು ತಿರಸ್ಕರಿಸುವುದು ಅನಿವಾರ್ಯವಾಗಿದೆ. ಓದುಗರು ದಯವಿಟ್ಟು ಚಿತ್ರವನ್ನು ಸರಿಯಾಗಿ ವೀಕ್ಷಿಸಿ ಇತರ ಪೂರ್ತಿ ವಿವರಗಳನ್ನು ಗಮನಿಸಿ ಕಥೆ ರಚಿಸಬೇಕು. ಇದ್ದದ್ದುರಲ್ಲಿ ಚಿತ್ರಕ್ಕೆ ಹತ್ತಿರವಾದಂಥ ಕಥೆಗಳನ್ನು ಆಯ್ಕೆಮಾಡಿ ಪ್ರಕಟಿಸುತ್ತಿದ್ದೇವೆ. ಇನ್ನು ಹಾಳೆಯ ಒಂದೇ ಮಗ್ಗುಲಲ್ಲಿ ಬರೆಯಬೇಕೆಂದು ಪ್ರತಿಸಾರಿ ಎಚ್ಚರಿಸಿದರೂ, ಹಾಳೆಯ ಎರಡೂ ಮಗ್ಗುಲುಗಳಲ್ಲಿ ಕೆಲವರು ಬರೆಯುತ್ತಿದ್ದಾರೆ. ಕೆಲವು ಕಥೆಗಳ ಜತೆ ಬರೆದವರ ಹೆಸರು-ವಿಳಾಸ ಕೂಡ ಇರುವುದಿಲ್ಲ. ಇಂಥ ಕಥೆಗಳನ್ನು ಗಮನಿಸಲಾಗುವುದಿಲ್ಲ ಎಂದು ಈ ಮೂಲಕ ಸ್ಪಷ್ಟಪಡಿಸುತ್ತಿದ್ದೇವೆ.

—ಸಂ.

### ಆಹುತಿ

— **ಗೀತಾರಾವ್**

"ಬೇಡ ಜಯಂತ್. ನೀವು ಹೀಗೆ ಕುಡಿದು ಬರುವುದು, ದಿನಾ ಅವನು ನಿಮ್ಮನ್ನು ಕರೆತರುವುದು, ಅವನ ಕಾಮುಕ ಕಣ್ಣುಗಳಿಗೆ ನಾನು ಆಹಾರವಾಗುವುದು, ನನಗೆ ಸ್ವಲ್ಪವೂ ಇಷ್ಟವಿಲ್ಲ, ದಯವಿಟ್ಟು ನನ್ನ ಮಾತು ಕೇಳಿ ಮನೆಯಲ್ಲೇ ಕುಳಿತು ತೃಪ್ತಿಯಾಗುವ ತನಕ ಕುಡಿಯಿರಿ. ಕ್ಲಬ್‌ಗೆ ಮಾತ್ರ ಹೋಗಬೇಡಿ. ಇವತ್ತು ಅತ್ತೆ-ಮಾವನೂ ಮನೆಯಲ್ಲಿ ಇಲ್ಲ." ದೀನಳಾಗಿ ಕಣ್ಣೀರು ತುಂಬಿ ಎದುರಿಗೆ ನಿಂತು ಬೇಡುವ ಹೆಂಡತಿಯ ಕಡೆ ನಿಕೃಷ್ಟವಾಗಿ ನೋಡಿ ಅವಳ ಮಾತಿಗೆ ಉತ್ತರವನ್ನೂ ನೀಡದೆ ನಿರ್ಲಕ್ಷ್ಯದಿಂದ ಅವಳನ್ನು ತಳ್ಳಿ ಹೊರಟು ಹೋದ. ಜಯಂತ್‌ನನ್ನೇ ಅಸಹಾಯಕಳಾಗಿ ಕಣ್ತುಂಬಿ ನೋಡುತ್ತಾ, ನಿಂತಳು.

ಸುಮ ಹೆಸರಿಗೆ ತಕ್ಕಂತೆ ಹೂವಿನಂಥವಳು. ತಂದೆ-ತಾಯಿಯರ ಮುದ್ದಿನ ಮಗಳಾಗಿ, ಅಣ್ಣನ ಅಕ್ಕರೆಯ ತಂಗಿಯಾಗಿ ಸುಖದಿಂದ ಬೆಳೆದವಳು. ಮದುವೆಯ ವಯಸ್ಸಿಗೆ ಬಂದ ಮುದ್ದಾದ ಮಗಳನ್ನು ಅನುರೂಪನಾದ ಹುಡುಗನಿಗೆ ಕೊಡಬೇಕೆಂದು ವರಾನ್ವೇಷಣೆಯಲ್ಲಿದ್ದರು. ಗೆಳತಿಯ ಮದುವೆಯಲ್ಲಿ ಆಕರ್ಷಕವಾಗಿ ಅಲಂಕರಿಸಿಕೊಂಡು ಓಡಾಡುತ್ತಿದ್ದ ಸುಮ, ಅಲ್ಲಿದ್ದ ಜಯಂತನ ತಾಯಿಯ ದೃಷ್ಟಿಗೆ ಬಿದ್ದಳು. ಮಗನಿಗೆ ಮೂಗುದಾರ ಹಾಕಲು ಸರಿಯಾದ ಹುಡುಗಿಯೆಂದು ತೀರ್ಮಾನಿಸಿದರು. ಮುಂದಿನದೆಲ್ಲಾ ಹೂವಿನ ಸರ ಎತ್ತಿದಷ್ಟು ಸುಲಭವಾಗಿ ಸುಮ-ಜಯಂತನ ಮನೆ ತುಂಬಿದಳು. ಜಯಂತನಂತಹ ಸ್ಫುರದ್ರೂಪಿ, ಶ್ರೀಮಂತ ಯುವಕ ಅವಳಿಗೆ ದೊರೆತಿದ್ದು ಎಲ್ಲರಿಗೂ ಸಂತಸ ನೀಡಿತ್ತು.

ಆದರೆ ಆ ಸಂತೋಷ ಹೆಚ್ಚು ದಿನ ಉಳಿಯಲಿಲ್ಲ. ತಾನು ಪ್ರೀತಿಸಿದ ಹುಡುಗಿಯನ್ನು ಮದುವೆಯಾಗಲು ಅಡ್ಡಿಯಾದ ತಂದೆ-ತಾಯಿಯ ಮೇಲಿದ್ದ ರೋಷವನ್ನು ಅವನು ಸುಮಳ ಮೇಲೆ ತೋರಿಸುತ್ತಿದ್ದನು. ದಿನಾ ಕುಡಿದು ಬರುವುದು.

ಅವಳನ್ನು ಹೊಡೆಯುವದು, ಹಿಂಸಿಸುವುದು ನಡದೇ ಇತ್ತು. ಅತ್ತೆ-ಮಾವ ಇದನ್ನೆಲ್ಲಾ ಅಸಹಾಯಕರಾಗಿ ನೋಡುತ್ತಿದ್ದರು. ವಿಷಯ ತಿಳಿದ ಅವಳ ಅಣ್ಣ ಕರೆಯಲು ಬಂದಾಗ ಅವಳು ಹೋಗಲು ನಿರಾಕರಿಸಿದ್ದಳು. ಎಂದಾದರೊಂದು ದಿನ ಅವನು ಸರಿಯಾಗುವನೆಂಬ ನಂಬಿಕೆ. ಆದರೆ ದಿನಾ ಕುಡಿದವನನ್ನು ಕರೆದು ತರುತ್ತಿದ್ದ ಪ್ರಸಾದನ ಅಸಭ್ಯ ವರ್ತನೆ ಅಸಹನೀಯವಾಗುತ್ತಿತ್ತು. ಮಾವನ ಸಹಾಯದಿಂದ ಅವನನ್ನು ಒಳಗೆ ಕರೆತರುತ್ತಿದ್ದವನ ನೋಟದಲ್ಲೇ ಬೆತ್ತಲಾಗಿಸುವ ಕಾಮುಕದೃಷ್ಟಿ ಅವಳನ್ನು ಹಿಂಡುತ್ತಿತ್ತು. ಒಳಗೇ ಕುದಿಯುತ್ತಿರುವ ಬೆಂಕಿಯನ್ನು ಮೇಲೆ ತೋರಿಸದೆ ಪ್ರಶಾಂತವಾಗಿರುತ್ತಿದ್ದಳು.

ಅಂದು ಮದುವೆಗೆ ಹೋಗಿದ್ದ ಅತ್ತೆ-ಮಾವ ಬರುವುದು ತಡವಾಯಿತು. ಆಗ ಕೇಳಿ ಬಂತು ಕರೆಗಂಟೆಯ ಧ್ವನಿ. ನಡುಗುತ್ತಲೇ ಬಾಗಿಲು ತೆರೆದಳು. ಮಾಮೂಲಿನ ದೃಶ್ಯ. ಮಾವನವರಿಲ್ಲದ ಕಾರಣ ಅವಳೇ ಪ್ರಸಾದ್‌ಗೆ ಜೊತೆಯಾಗಿ ಜಯಂತನನ್ನು ಒಳನೆ ಕರೆತಂದು ಮಂಚದ ಮೇಲೆ ಮಲಗಿಸಲು ನೆರವಾದಳು. ಮನೆಯಲ್ಲಿ ಯಾರಿಲ್ಲ ವೆಂಬ ಸೂಕ್ಷ್ಮ ತಿಳಿದೊಡನೆ, ಇಂತಹ ಒಂದು ಸುಸಂದರ್ಭಕ್ಕಾಗಿ ಕಾಯುತ್ತಿದ್ದ ಪ್ರಸಾದ್ ಅವಳ ಬಳಿ ಬಂದು ಸ್ವಲ್ಪ ದುಡ್ಡು ಬೇಕಾಗಿತ್ತೆಂದು ಕೇಳಿದನು. ಅವನು ಬೇಗ ಹೋದರೆ ಸಾಕೆಂದು ಬೀರು ತೆಗೆದು ನೋಟಿನ ಕಂತೆಗಳನ್ನು ಅವನ ಮುಂದೆ ಹಾಕಲು ತಿರುಗಿದಾಗ ಹಿಂದಿನಿಂದ ಅವಳನ್ನು ಬಳಸಿ ಹಿಡಿದನು. ಅವಳು ಕೊಸರಾಡಿ ಅವನಿಂದ ಬಿಡಿಸಿಕೊಂಡು ಅವನನ್ನು ದೂರ ತಳ್ಳಿದಳು. ಒಮ್ಮೆಲೇ ರೋಷ ಉಕ್ಕಿಬಂತು, ಅಸಹಾಯಕ ಹೆಣ್ಣು ಎಂದು ತನ್ನನ್ನು ತಿಳಿದಿರುವ ಅವನಿಗೆ ಸರಿಯಾಗಿ ಬುದ್ಧಿ ಕಲಿಸಬೇಕೆಂದು. ಬೀರುವಿನಲ್ಲಿದ್ದ ಪಿಸ್ತೂಲನ್ನು ಎತ್ತಿಕೊಂಡಳು. ಅದನ್ನು ಕಂಡ ಪ್ರಸಾದ್ ಹೊರಗೋಡಲು ನೋಡಿದನು. ಆದರೂ ಅದರಿಂದ ಸಿಡಿದ ಗುಂಡು ಅವನ ದೇಹವನ್ನು ಸೀಳಿತ್ತು. ಅಷ್ಟರಲ್ಲಿ ಒಳಗೆ ಬಂದ ಮಾವ ಪರಿಸ್ಥಿತಿಯನ್ನು ಊಹಿಸಿ ಸತ್ತ ಪ್ರಸಾದನ ಬಳಿ ಅಸಹಾಯಕರಾಗಿ ಕೂತರು. ಸಹನಾಮೂರ್ತಿಯಂತಿದ್ದ ಸುಮಳ ಮನದಿಂದ ಸಿಡಿದ ಜ್ವಾಲಾಮುಖಿ ಪ್ರಸಾದ್‌ನನ್ನು ಆಹುತಿ ತೆಗೆದುಕೊಂಡಿತ್ತು.

* * *

## ಪಶ್ಚಾತ್ತಾಪ

ದೊಡ್ಡ ಎಸ್ಟೇಟ್‌ಗೆ ಮಾಲೀಕ. ಎರಡು ಫ್ಯಾಕ್ಟರಿಯ ಓನರ್. ಇಂತಹ ಸಂಬಂಧ ಬಿಟ್ಟವ ರುಂಟೆ. ರಾಜಮ್ಮ ಮಾಡಿದ್ದೂ ಅದೇ. ಸುಂದರಿ ಯಾದ ತನ್ನ ಮಗಳನ್ನು ಕುಮಾರ್‌ಗೆ ಕೊಡಲು ಒಪ್ಪಿದ್ದು. ಏಕೆಂದರೆ ಬೆಳೆದ ಹೆಣ್ಣುಮಕ್ಕಳು ಸೆರಗಿ ನಲ್ಲಿ ಕಟ್ಟಿದ ಕೆಂಡ! ಅದರಲ್ಲೂ ಬಡವರ ಹೆಣ್ಣು ಮಕ್ಕಳು ಸುಂದರವಾಗಿದ್ದರೆ ಅದೇ ಅವರಿಗೆ ಶಾಪ! ಎಂಬುದು ಅವರ ಅನುಭವ.

ಒಂದೇ ತಿಂಗಳಲ್ಲಿ ಕುಮಾರ್ ಮತ್ತು ಅನಿತಾರ ಮದುವೆ ಭರ್ಜರಿಯಾಗಿ ಜರುಗಿತು. ವಿಷಯ ತಿಳಿದ ಅನಿತಾಳ ಪ್ರೇಮಿ ಪ್ರಕಾಶ್ ಮೊದಲು ರಗಳೆ ಮಾಡಿದರೂ ನಂತರ ದೊಡ್ಡ ಯೋಜನೆಯನ್ನು ರೂಪಿಸಿ ಅನಿತಾಳಿಗೆ ತಿಳಿಸಿದ. ಅನಿತಾ ಗಾಬರಿ ಗೊಂಡಳು. ಕೊಲೆ ವಿಷಯವೆಂದು ಹೆದರಿದಳು. ಛಲಬಿಡದ ತ್ರಿವಿಕ್ರಮನಂತೆ ಪ್ರಕಾಶ್ ಅನಿತಾಳನ್ನು ಒಪ್ಪಿಸುವಲ್ಲಿ ಯಶಸ್ವಿಯಾದ.

ಎರಡು ಬಾರಿ ಕುಮಾರ್‌ನನ್ನು ಕೊಲೆ ಮಾಡುವುದಕ್ಕೆ ಅಡ್ಡಿಯಾದ ಅನಿತಾಳ ಮೇಲೆ ಪ್ರಕಾಶ್‌ಗೆ ಎಲ್ಲಿಲ್ಲದ ಸಿಟ್ಟಾಗಿ ಕುಮಾರ್ ಇಲ್ಲದ ವೇಳೆಗೆ ಅವರ ಮನೆಗೆ ಬಂದು.

"ಅನಿತಾ ನಾನು ಹೇಳಿದ್ದೇನು? ನೀನು ಮಾಡಿದ್ದೇನು? ನೀನೇ ಎರಡು ಸಾರಿ ಅವನನ್ನು ಬಚಾವ್ ಮಾಡಿದ್ದೀ. ಈ ಬಾರಿ ನಾ ಹೇಳಿದ ರೀತಿ ನೀನು ಮಾಡದಿದ್ದರೆ ನೀನು ನನ್ನ ಜೊತೆಗೆ ತೆಗೆಸಿರುವ ಫೋಟೋ ನಿನ್ನ ಗಂಡನ ಕೈ ಸೇರುತ್ತೆ. ಕುಮಾರ್ ತಾನಾಗೇ ನಿನ್ನ ಬಿಡೋ ರೀತಿ ಮಾಡ್ತೀನಿ" ಎಂದು ಬೆದರಿಸಿದಾಗ ಅದಕ್ಕೆ ಅನಿತಾ "ಪ್ರಕಾಶ್ ಆ ಕೆಟ್ಟ ಗಳಿಗೆಯಲ್ಲಿ ಒಪ್ಪಿದೆ. ಈಗ ಪಶ್ಚಾತ್ತಾಪ ಪಡ್ತಿದ್ದೀನಿ. ಅವರು ನನ್ನ ದೇವರು. ಅವರನ್ನು ಕೊಲ್ಲಬೇಡ ನಿಮಗೆ ಎಷ್ಟು ಹಣ ಬೇಕಾದ್ರೂ ಕೊಡ್ತೀನಿ" ಎಂದಳು.

"ಅರೆರೆ ಆರು ತಿಂಗಳಿಗೇ ಇಷ್ಟೊಂದು ಪ್ರೀತಿನಾ. ನಿನ್ನ ಪ್ರೀತಿನ ಕಟ್ಟಿಟ್ಟು ಇದೊಂದು ಬಾರಿ ಸಹಕರಿಸು. ನಿನ್ನ ರಾಣಿ ಮಾಡ್ತೀನಿ. ನಾಳೆ ಸಂಜೆ ಆಂಜನೇಯಸ್ವಾಮಿ ದೇವಸ್ಥಾನಕ್ಕೆ ಕರ್ಕೊಂಡು ಬಾ. ಏನಾದ್ರೂ ಕೈ ಕೊಟ್ಟರೆ ನಿನ್ನ ಫೋಟೋ!" ಎಂದು ಹೆದರಿಸಿ ಹೋದ ಪ್ರಕಾಶ್.

ಮಾರನೆ ದಿನ ಅನಿತಾ, 'ನಾನು ಹೇಗೆ ಅವರನ್ನು ಕರ್ಕೊಂಡು ಹೋಗ್ಲಿ. ಎಲ್ಲಾ ವಿಷಯವನ್ನೂ ಅವರಿಗೆ ತಿಳಿಸಿಬಿಡಲೇ, ಹೂವಂತೆ ನೋಡುತ್ತಿರುವ ಅವರಿಗೆ ನಾನೇ ಮುಳ್ಳಾಗುವುದೇ' ಎಂದು ಯೋಚಿಸುತ್ತಿರುವಾಗ,

"ಅನೀ ಈ ದಿನ ನನ್ನ ಹುಟ್ಟಿದ ಹಬ್ಬ. ಸಂಜೆ ರೆಡಿಯಾಗು. ಆಂಜನೇಯಸ್ವಾಮಿ ದೇವಸ್ಥಾನಕ್ಕೆ ಹೋಗಿ ಬರೋಣ" ಎಂದ. ಪ್ರಕಾಶ್‌ಗೆ ಬೇಡವೆಂದು ಹೇಳುವ ಮನಸ್ಸಾದರೂ ಕುಮಾರ್‌ನ ಮಾತನ್ನು ತಿರಸ್ಕರಿಸುವಂತಿರಲಿಲ್ಲ. ಸಂಜೆ ಐದು ಗಂಟೆಗೆ ದೇವಸ್ಥಾನಕ್ಕೆ ಹೋದ್ರೂ ಪೂಜೆ ಮಾಡಿಸಿ ಬರುವ ವೇಳೆಗೆ ಆರು ಗಂಟೆಯಾಗಿತ್ತು. ಇಬ್ಬರೂ ಎದುರಿಗಿರುವ ಕಟ್ಟೆ ಮೇಲೆ ಕುಳಿತು ಮಾತಾಡುತ್ತಿರುವಾಗ ಎದುರಿಂದ ಪ್ರಕಾಶ್ ಕೋಟಿನ ಒಳ ಜೇಬಿನಿಂದ ಪಿಸ್ತೂಲ್ ತೆಗೆಯುತ್ತಾ ಮುಂದೆ ಬರುತ್ತಿರುವಾಗ, ಆತ ಹಿಂದೆ ಬರುತ್ತಿದ್ದ ಕಾರ್‌ನ ಹಾರನ್ ಕೇಳುವ ಸ್ಥಿತಿಯಲ್ಲಿರಲಿಲ್ಲ. ಎಷ್ಟೇ ನಿಯಂತ್ರಿಸಿದರೂ ವೇಗವಾಗಿ ಬರುತ್ತಿದ್ದ ಕಾರ್ ಪ್ರಕಾಶ್‌ಗೆ ಬಡಿಯಿತು. ಪಿಸ್ತೂಲ್ ದೂರದಲ್ಲಿ ಬಿತ್ತು ಆ ಕ್ಷಣ ಪ್ರಕಾಶ್ ರಕ್ತದ ಮಡುವಿನಲ್ಲಿದ್ದ. ಪ್ರಾಣ ಹೋಗಿತ್ತು!

ಅದನ್ನು ಕಣ್ಣಾರೆ ಕಂಡ ಅನಿತಾ ಕುಮಾರ್‌ಗೆ,

"ದೇವರು ದೊಡ್ಡೋನು. ನಿಮ್ಮನ್ನು ಉಳಿಸಿ ಬಿಟ್ಟ. ಇಲ್ಲದಿದ್ದರೆ ನಾನು ಖಂಡಿತಾ ಬದುಕುತ್ತಿರಲಿಲ್ಲ" ಎಂದಾಗ,

"ನಿನ್ನೆದಿನ ಆತ ನಿನ್ನ ಜೊತೆ ಮನೇಲಿ ಮಾತಾಡಿದ್ದನ್ನು ನಾನು ಕೇಳಿಸ್ಕೊಂಡೆ. ಅದಕ್ಕೇ ನಾನೇ ಖುದ್ದಾಗಿ ನಿನ್ನ ಇಲ್ಲಿಗೆ ಕರ್ಕೊಂಡು ಬಂದಿದ್ದು. ಅಲ್ಲದೆ ಬುಲೆಟ್ ಪ್ರೂಫ್ ಜಾಕೆಟ್ ಹಾಕಿದ್ದೇನೆ. ಆತನ ತಪ್ಪಿಗೆ ದೇವರೇ ಅವನಿಗೆ ಶಿಕ್ಷೆ ಕೊಟ್ಟ" ಎಂದನು ಕುಮಾರ್.

"ನಾನು ಅವನೊಂದಿಗೆ ಕೊಲೆಗೆ ಒಪ್ಪಿದ್ದೇ ಮೊದಲ ತಪ್ಪು. ಅದಕ್ಕೆ ನೀವೇನು ಶಿಕ್ಷೆ ಕೊಟ್ಟರೂ ನಾನು ಸಿದ್ಧ" ಎಂದ ಅನಿತಾಗೆ.

"ಮಾಡಿದ ತಪ್ಪಿಗೆ ಪಶ್ಚಾತ್ತಾಪ ಮಾಡಿ ಕೊಂಡರೆ ಅದೇ ಶಿಕ್ಷೆ. ಅದನ್ನು ನೀನಾಗ್ಲೇ ಮಾಡಿ ನನ್ನ ಎರಡು ಬಾರಿ ಉಳಿಸಿದ್ದೀಯ. ನೀನೇ ನನ್ನ ಭಾಗ್ಯದೇವತೆ" ಎಂಬ ಕುಮಾರ್‌ನ ಮಾತು ಅನಿತಾಗೆ ದೇವರ ವರವಾಯ್ತು.

**— ಜಿ. ಶಕುಂತಲ, ಮೈಸೂರು**



**ಮುಖಪುಟ:**

## ಕುಮಾರಿ ನಿರುಪಮಾ

ಕುಮಾರಿ ನಿರುಪಮಾ ನಾಟ್ಯ ಕ್ಷೇತ್ರದಲ್ಲಿ ಚಿರಪರಿತ ಹೆಸರು. ನಾಟ್ಯ ಕ್ಷೇತ್ರದಲ್ಲಿ ದೇಶ ವಿದೇಶಗಳಲ್ಲಿ ಖ್ಯಾತರಾದ ಶ್ರೀಮತಿ ಮಾಯಾ-ರಾವ್, ನರ್ಮದಾ ಹಾಗೂ ಕಲಾಮಂಡಲಂ ರಾಧಿಕಾ ಇವರ ಅಚ್ಚುಮೆಚ್ಚಿನ ಶಿಷ್ಯೆ ಎಂದು ಹೇಳಿದರೆ ನಿರುಪಮಾ ಎಂತಹ ಕಲಾವಿದೆ ಎಂಬುದನ್ನು ತಿಳಿಯಬಹುದು.

ಶ್ರೀ ವಿ. ಎಲ್. ರಾಮಸ್ವಾಮಿ ಅಯ್ಯಂಗಾರ್ ಅವರ ಪುತ್ರಿ ನಿರುಪಮಾ, ಬಾಲ್ಯದಿಂದಲೇ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಆಸಕ್ತಿ ತೋರಿದ ಹುಡುಗಿ. ಈ ಆಸಕ್ತಿ ಆಕೆಯೊಂದಿಗೆ ಬೆಳೆದು ಕೊರಿಯೊಗ್ರಫಿಯಲ್ಲಿ ನಿರುಪಮಾ ಡಿಪ್ಲೊಮಾ ಪಡೆಯುವಂತೆ ಮಾಡಿತು. ಬೆಂಗಳೂರು ವಿಶ್ವ ವಿದ್ಯಾನಿಲಯದಲ್ಲಿ ಅಂತಿಮ ಬಿ. ಎ. ಯಲ್ಲಿ ನೃತ್ಯಾಭ್ಯಾಸ ಮಾಡುತ್ತಿರುವ ನಿರುಪಮಾ ಬೆಂಗಳೂರು ದೂರದರ್ಶನ ವೀಕ್ಷಕರಿಗೆ ಚಿರಪರಿಚಿತಳು. ದಸರಾ ಮಹೋತ್ಸವ, ಪಟ್ಟದಕಲ್ಲು ನೃತ್ಯೋತ್ಸವಗಳಲ್ಲಿ ತಪ್ಪದೆ ಪಾಲ್ಗೊಳ್ಳುವ ನಿರುಪಮಾ ಆಹ್ವಾನದ ಮೇರೆಗೆ ಸಿಂಗಪೂರ್ ಮತ್ತು ಮಾಲ್ಡೀವ್ ನಡುಗಡ್ಡೆಗಳಿಗೆ ಹೋಗಿ ನೃತ್ಯ ಕಾರ್ಯಕ್ರಮಗಳನ್ನು ನೀಡಿರುವುದೂ ಇದೆ. 'ಪ್ರಭಾತ್ ಕಲಾವಿದರು' ನಡೆಸುವ ನೃತ್ಯ ಕಾರ್ಯಕ್ರಮಗಳಲ್ಲಿ ನಿರುಪಮಾ ತಪ್ಪದೇ ಭಾಗ ವಹಿಸುತ್ತಾರೆ.

ಪ್ರಸ್ತುತ ಮೆಸರ್ಸ್ ಲಾಸ್ಯ ಡಾನ್ಸ್ ಕಂಪನಿ ಯೊಂದಿಗೆ ಒಪ್ಪಂದದ ಮೇಲೆ ಭಾರತೀಯ ನೃತ್ಯ ಕಲೆ ಹಾಗೂ ಸಂಸ್ಕೃತಿಗಳ ಪ್ರಚಾರಕ್ಕಾಗಿ ಅಮೆರಿಕ ಪ್ರವಾಸದಲ್ಲಿದ್ದಾರೆ. ನಿರುಪಮಾ ಅವರಿಗೆ ವನಿತಾ ಸಕಲ ಯಶಸ್ಸುಗಳನ್ನು ಹಾರೈಸುತ್ತದೆ. **

ಚಿತ್ರ: ಡಿ. ಸಿ. ನಾಗೇಶ್

## ಕಟ್ಲೆಟ್ ಮತ್ತು ಟೊಮ್ಯಾಟೊ ಗ್ರೇವಿ

### ಕಟ್ಲೆಟ್‌ಗೆ ಅವಶ್ಯಕ ಸಾಮುಗ್ರಿಗಳು

1 ಕಿಲೋ ಆಲೂಗೆಡ್ಡೆ
300 ಗ್ರಾಂ ಈರುಳ್ಳಿ
5–6 ಹಸಿಮೆಣಸಿನ ಕಾಯಿ
2 ಟೀ ಚಮಚ ಹೆಚ್ಚಿದ ಕೊತ್ತಂಬರಿ ಸೊಪ್ಪು
1 ಲಿಂಬೆ ಹಣ್ಣು (ಸಾರು ತೆಗೆದಿಟ್ಟುಕೊಳ್ಳಬೇಕು)
1 ಕಪ್ ಬ್ರೆಡ್ ಹುಡಿ
100 ಗ್ರಾಂ ಆಲೂಗಡ್ಡೆ ಬಾಳಕ
ಹುರಿಯಲು ಸಾಕಾಗುವಷ್ಟು ಎಣ್ಣೆ

### ಗ್ರೇವಿಗೆ ಅವಶ್ಯಕ ಸಾಮುಗ್ರಿಗಳು

1 ಕಿಲೋ ಟೊಮ್ಯಾಟೊ
3 ಟೀ ಚಮಚ ಸಕ್ಕರೆ
½ ಟೀ ಚಮಚ ಒಣ ಮೆಣಸಿನಕಾಯಿ ಪುಡಿ
2 ಟೇಬಲ್‌ಸ್ಪೂನ್ ಟೊಮ್ಯಾಟೊ ಗೊಜ್ಜು (ಸಾಸ್)
ರುಚಿಗೆ ಬೇಕಾಗುವಷ್ಟು ಉಪ್ಪು

### ಕಟ್ಲೆಟ್ ಮಾಡುವ ವಿಧಾನ

ಆಲೂಗಡ್ಡೆಗಳನ್ನು ನೀರಿನಲ್ಲಿ ಹಾಕಿ ಬೇಯಿಸಿ, ಸಿಪ್ಪೆ ಸುಲಿದು ಚೆನ್ನಾಗಿ ಹಿಸುಕಿ ಮುದ್ದೆಮಾಡಿ. ಈಗ ಈರುಳ್ಳಿಯನ್ನು ಚಿಕ್ಕದಾಗಿ ಹೆಚ್ಚಿಕೊಳ್ಳಿ. ನಂತರ ಆಲೂಗೆಡ್ಡೆ ಮುದ್ದೆಗೆ ಹೆಚ್ಚಿದ ಈರುಳ್ಳಿ, ಕೊತ್ತಂಬರಿ ಸೊಪ್ಪು, ಲಿಂಬೆ ಹಣ್ಣಿನ ರಸ, ಹಾಗೂ ಉಪ್ಪನ್ನು ಹಾಕಿ ಹಿಸುಕಿ ಚೆನ್ನಾಗಿ ಬೆರೆಸಿರಿ.



ನಂತರ ನಿಮಗೆ ಬೇಕಾದ ಆಕಾಶದಲ್ಲಿ ಕಟ್ಲೆಟ್‌ಗಳನ್ನು ಮಾಡಿರಿ. ಆಮೇಲೆ ಒಲೆಯ ಮೇಲೆ ನಾನ್ ಸ್ಟಿಕ್ ಫ್ರಾಯಿಂಗ್ ಪ್ಯಾನ್ ಇಟ್ಟು ಎಣ್ಣೆ ಹಾಕಿ, ಬ್ರೆಡ್ ಪುಡಿಯಲ್ಲಿ ಕಟ್ಲೆಟ್ ಉರುಳಿಸಿ ಎಣ್ಣೆಯಲ್ಲಿ ಬಿಟ್ಟು ಕೆಂಪಗೆ ಹುರಿಯಿರಿ.

### ಗ್ರೇವಿ ಮಾಡುವ ವಿಧಾನ

ಟೊಮ್ಯಾಟೊಗಳನ್ನು ಚಿಕ್ಕದಾಗಿ ಹೆಚ್ಚಿ ಪ್ರೆಷರ್ ಕುಕ್ಕರ್‌ನಲ್ಲಿಟ್ಟು ಮೂರು ನಿಮಿಷಗಳ ಕಾಲ ಬೇಯಿಸಿರಿ. ನಂತರ ಬ್ಲೆಂಡರ್‌ನಲ್ಲಿ ಹಾಕಿ ಚೆನ್ನಾಗಿ ತಿರುವಿ ಜರಡಿಯಲ್ಲಿ ಗಾಳಿಸಿ ರಸ ತೆಗೆದಿಟ್ಟುಕೊಳ್ಳಿ. ಅದಕ್ಕೆ ಸಕ್ಕರೆ, ಉಪ್ಪು, ಟೊಮ್ಯಾಟೊ ಸಾಸ್ ಮೆಣಸಿನ ಪುಡಿ ಹಾಕಿ ಈ ಮಿಶ್ರಣ ದಪ್ಪಗಾಗುವ ವರೆಗೂ ಬೇಯಿಸಿರಿ. ನಂತರ ಕರಿದ ಕಟ್ಲೆಟ್‌ಗಳನ್ನು ಒಂದು ದೊಡ್ಡ ತಟ್ಟೆಯಲ್ಲಿ ಹರಡಿ, ಕಟ್ಲೆಟ್‌ಗಳ ಮಧ್ಯದಲ್ಲಿ ಗ್ರೇವಿಯನ್ನು ಹಾಕಿರಿ. ನಂತರ ಇವುಗಳ ಮೇಲೆ ಆಲೂಗೆಡ್ಡೆ ಬಾಳಕಗಳನ್ನು ಚೆಲ್ಲಿರಿ. ಹಾಗೂ ಚಪಾತಿಯೊಂದಿಗೆ ತಿನ್ನಲು ಅಥವಾ ಚಹಾ ಕುಡಿಯುವ ಸಮಯದಲ್ಲಿ ತಿನ್ನಲು. ನೀಡಿರಿ.

## ಬೆಂಡೆಕಾಯಿ ಭಾತ್ ಮತ್ತು ಟೊಮ್ಯಾಟೊ ಸೂಪ್

### ಅವಶ್ಯಕ ಸಾಮುಗ್ರಿಗಳು

30 ಗ್ರಾಂ ಅಕ್ಕಿ
30 ಗ್ರಾಂ ಬೆಣ್ಣೆ
15 ಗ್ರಾಂ ಸೊಪ್ಪು
340 ಗ್ರಾಂ ಟೊಮ್ಯಾಟೊ
55 ಗ್ರಾಂ ಮೆಣಸಿನ ಕಾಯಿ
30 ಗ್ರಾಂ ಈರುಳ್ಳಿ
155 ಗ್ರಾಂ ಬೆಂಡೆಕಾಯಿ
ಚಿಟಿಕೆ ಮೆಣಸಿನಕಾಳು ಪುಡಿ
ರುಚಿಗೆ ತಕ್ಕಷ್ಟು ಉಪ್ಪು

### ಮಾಡುವ ವಿಧಾನ



ಅರ್ಧ ಬೆಣ್ಣೆಯನ್ನು ಬಿಸಿಮಾಡಿ ಅದರಲ್ಲಿ ಅಕ್ಕಿಯನ್ನು ಹಾಕಿ ಬಂಗಾರದ ಬಣ್ಣ ಬರುವವರೆಗೆ ಹುರಿಯಿರಿ. ನಂತರ ಅದಕ್ಕೆ ನೀರು ಹಾಕಿ ಬೇಯಿಸಿರಿ. ತೊಳೆದು ಬೀಜ ತೆಗೆದ ಮೆಣಸಿನ ಕಾಯಿಯನ್ನು ಚಿಕ್ಕದಾಗಿ ಹೆಚ್ಚಿರಿ. ಹಾಗೆಯೇ ಈರುಳ್ಳಿಯನ್ನು ಸಣ್ಣದಾಗಿ ಹೆಚ್ಚಿರಿ. ಟೊಮ್ಯಾಟೊಗಳನ್ನು ಸುಲಿದು ಚೆನ್ನಾಗಿ ಜಜ್ಜಿಕೊಳ್ಳಿರಿ. ಬೆಂಡೆಕಾಯಿಗಳನ್ನು ಗುಂಡಗೆ ಬಿಲ್ಲೆಗಳಾಗಿ ಹೆಚ್ಚಿಕೊಳ್ಳಿರಿ. ನಂತರ ಉಳಿದ ಬೆಣ್ಣೆಯನ್ನು ಬಿಸಿ ಮಾಡಿ ಅದರಲ್ಲಿ ಸೊಪ್ಪು, ಮೆಣಸಿನ ಕಾಯಿ, ಮತ್ತು ಈರುಳ್ಳಿಗಳನ್ನು ಹಾಕಿ ಹುರಿಯಿರಿ. ನಂತರ ಇದಕ್ಕೆ ಮಾಡಿಟ್ಟ ಟೊಮ್ಯಾಟೊ ಗೊಜ್ಜನ್ನು ಬೆರೆಸಿ ಕುದಿಸಿರಿ. ನಂತರ ಇದನ್ನು ಅನ್ನದಲ್ಲಿ ಹಾಕಿ ಎಳೆ ಕುದಿ ಬರುವ ವರೆಗೆ ಮುಚ್ಚಿ ಬೇಯಿಸಿರಿ. ನಂತರ ಇದಕ್ಕೆ ಹುರಿದ ಬೆಂಡೆಕಾಯಿ ಬಿಲ್ಲೆಗಳನ್ನು ಬೆರೆಸಿ ಉಣ ಬಡಿಸಿರಿ.

# ಪಾಕಕಲೆ

## ಬೇಸಿನ್ ಪುಡ್ಡಿಂಗ್

### ಅವಶ್ಯಕ ಸಾಮಗ್ರಿಗಳು

250 ಗ್ರಾಂ ಕಡಲೆ ಹಿಟ್ಟು
¼ ಟೀ ಚಮಚ ಅರಶಿನ ಬಣ್ಣ
¼ ಲೀಟರ್ ಹಾಲು
250 ಗ್ರಾಂ ಖೋವಾ
500 ಗ್ರಾಂ ಸಕ್ಕರೆ
6 ಗೋಡಂಬಿ ಬೀಜಗಳು
8 ಬಾದಾಮಿ ಬೀಜಗಳು
20 ಕಿಸ್‌ಮಿಸ್ (ಒಣದ್ರಾಕ್ಷಿ)
ಕರಿಯಲು ಬೇಕಾದಷ್ಟು ಎಣ್ಣೆ

### ಮಾಡುವ ವಿಧಾನ

ಗೋಡಂಬಿ ಹಾಗೂ ಬಾದಾಮಿಗಳನ್ನು ಚೆನ್ನಾಗಿ ತುಂಡು ಮಾಡಿಟ್ಟುಕೊಳ್ಳಿ. ನಂತರ ಕಡಲೆ ಹಿಟ್ಟಿಗೆ ನೀರು ಹಾಕಿ ಚಕ್ಕುಲಿ ಕಣಕ ಮಾಡಿ ಅದಕ್ಕೆ ಅರಿಶಿನ ಬಣ್ಣವನ್ನು ಬೆರೆಸಿರಿ. ನಂತರ ಒಲೆಯ ಮೇಲೆ ಎಣ್ಣೆ ಬಾಣಲಿ ಇಟ್ಟು ಎಣ್ಣೆಹಾಕಿ, ಬಿಸಿಯಾದ ಮೇಲೆ, ಶ್ಯಾವಿಗೆ ಕಲ್ಲಿನಲ್ಲಿ ಹಾಕಿ ಸಣ್ಣ ಖಾರದಕಡ್ಡಿ ತಯಾರಿಸಿರಿ. ಇದಕ್ಕೆ ಸಕ್ಕರೆ ಅಥವಾ ಉಪ್ಪು ಹಾಕಬಾರದು. ನಂತರ ದಪ್ಪ ತಳವಿರುವ ಪಾತ್ರೆಯಲ್ಲಿ ಹಾಲನ್ನು ಹಾಕಿ ಕುದಿಸಿ ನಂತರ ಅದಕ್ಕೆ ಖೋವಾ ಬೆರೆಸಿರಿ. ನಂತರ ಅದಕ್ಕೆ ಸಕ್ಕರೆ, ಗೋಡಂಬಿ ಬಾದಾಮಿ ಮತ್ತು ಒಣದ್ರಾಕ್ಷಿಗಳನ್ನು (ಕಿಸ್‌ಮಿಸ್) ಹಾಕಿ ಬೆರೆಸಿ, ಈ ಮಿಶ್ರಣವನ್ನು ಸಣ್ಣ ಉರಿಯ ಮೇಲಿಟ್ಟು 5 ನಿಮಿಷಗಳ ಕಾಲ ಬೇಯಿಸಬೇಕು. ನಂತರ ಇದರಲ್ಲಿ ಈ ಖಾರದಕಡ್ಡಿ ಹಾಕಿ ಎರಡು ನಿಮಿಷಗಳ ಕಾಲ ನಿಧಾನವಾಗಿ ಗೊಟಾಯಿಸಬೇಕು. (ಹೀಗೆ ಗೋಟಾಯಿಸುವಾಗ ಖಾರದಕಡ್ಡಿ ಒಡೆಯದಂತೆ ಕಾಳಜಿ ವಹಿಸಬೇಕು) ನಂತರ ಅದನ್ನು ಒಲೆಯ ಮೇಲಿಂದ ಕೆಳಗಿಳಿಸಿ ಬೋಗುಣಿಯಲ್ಲಿ ಹಾಕಿ ಆರಲು ಬಿಡಿ.



## ಎಳೇ ಹಲಸಿನಕಾಯಿ ಉಪ್ಪಿನಕಾಯಿ

**ಬೇಕಾಗುವ ಸಾಮಾನು:** ಎಳೆ ಹಲಸಿನ ಕಾಯಿ 1, ಸಾಸಿವೆ 2 ಚಮಚ, ಅರಿಶಿನ ಒಂದು ಚಮಚ, ಕರಿಬೇವಿನೆಲೆ ನಾಲ್ಕು, ಉಪ್ಪು ರುಚಿಗೆ ತಕ್ಕಷ್ಟು, ಮೆಣಸಿನ ಪುಡಿ, ಎಣ್ಣೆ.

**ವಿಧಾನ:**–ಹಲಸಿನ ಕಾಯಿ ಸಿಪ್ಪೆಯನ್ನು ಕೆತ್ತಿ ತೆಗೆದು ಹಾಕಿ ಅದನ್ನು ಕೊಚ್ಚಿ ಹೋಳು ಮಾಡಿ ಬೇಯಿಸಬೇಕು. ಉಪ್ಪನ್ನು ನೀರು ಹಾಕಿ ಬತ್ತಿಸಬೇಕು. ನಂತರ ಒಲೆಯ ಮೇಲೆ ಎಣ್ಣೆಲೆ ಕಾಯಿಸಲು ಇಟ್ಟು ಸಾಸಿವೆ, ಕರಬೇವಿನೆಲೆ, ಅರಿಶಿನ ಹಾಕಿ ಒಗ್ಗರಣೆ ಮಾಡಿ, ಅದರಲ್ಲಿ ಹಲಸಿನ ಹೋಳು ಹಾಗೂ ಮೆಣಸಿನ ಪುಡಿಯನ್ನು ಹಾಕಿ ಕಲಸಬೇಕು.

## ಕಾಯಿಪಲ್ಲೆ ಉಪ್ಪಿನ ಕಾಯಿ

ಕ್ಯಾಬೇಜ, ಬೀಟಗಡ್ಡೆ, ಹೂಕೋಸು, ಪಟಾಣಿ, ಗಜ್ಜರಿ, ಮೆಣಸಿನ ಪುಡಿ, ಹಿಂಗು, ಸಾಸಿವೆ ಮತ್ತು ಒಗ್ಗರಣೆಗೆ ಸಾಸಿವೆ, ಎಣ್ಣೆ ಇಲ್ಲವೇ ತೆಂಗಿನೆಣ್ಣೆ, ಲಿಂಬೇ ಹಣ್ಣು, ಉಪ್ಪು ಬೇಕು.

**ವಿಧಾನ:**– ನೂರು ಗ್ರಾಂ. ಪ್ರಮಾಣದಂತೆ ಮೇಲ್ಕಂಡ ಕಾಯಿಪಲ್ಲೆಗಳನ್ನು ಸ್ವಚ್ಛವಾಗಿ ತೊಳೆದು ½ ಇಂಚು ಉದ್ದ ಹೋಳು ಮಾಡಬೇಕು. ಹಸಿರು ಪಟಾಣಿಯನ್ನು ಕೊಚ್ಚದೆ ಹಾಕಬೇಕು. ಹೂಕೋಸನ್ನು ಸಣ್ಣ ಸಣ್ಣ ತುಂಡು ಮಾಡಿ ಕೊಚ್ಚಬೇಕು. ಇದಕ್ಕೆ ಲಿಂಬೆರಸ ಮತ್ತು ಉಪ್ಪು ಹಾಕಿ ಒಂದು ಹೊತ್ತು ಇಲ್ಲದೆ ಒಂದು ದಿನ ಒಂದು ಪಾತ್ರೆಯಲ್ಲಿ ಒತ್ತಿ ಇಟ್ಟು ತೆಗೆದು, ಹಿಂಗು, ಸಾಸಿವೆ ಹಾಕಿ, ಎಣ್ಣೆಯಲ್ಲಿ ಒಗ್ಗರಣೆ ಮಾಡಿ, ತಣಿಸಿ ಸೇರಿಸಬೇಕು. ಮೆಣಸಿನ ಪುಡಿಯನ್ನು ಸೇರಿಸಿ ಕಲಸಬೇಕು.

ಈ ಉಪ್ಪಿನಕಾಯಿ 8 ದಿನ ಹಾಳಾಗದೇ ಇರಬಲ್ಲುದು.

**—ಚಪಲಾ ಹೆಬ್ಬಾರ, ಅಗಸೂರು**

## ಬದನೆಕಾಯಿ ದೋಸೆ

**ಬೇಕಾಗುವ ಸಾಮಾನು:** ½ ಕೆ.ಜಿ. ಎಳೆಯ ಬದನೆಕಾಯಿ, 4 ಟೇಬಲ್‌ಸ್ಪೂನ್ ರಿಫೈಂಡ್ ಆಯಿಲ್, 1 ಪಾವು ಅಕ್ಕಿ, ಕಡಲೆ ಬೇಳೆ 1 ಟೇಬಲ್ ಸ್ಪೂನ್, ಉದ್ದಿನ ಬೇಳೆ 1 ಟೇಬಲ್‌ಸ್ಪೂನ್, ದನಿಯ 1 ಟೇಬಲ್‌ಸ್ಪೂನ್, ಸಾಸಿವೆ, ಜೀರಿಗೆ, ಮೆಂತ್ಯ ಒಂದೊಂದು ಟೀ ಸ್ಪೂನ್, 12 ಕೆಂಪು ಮೆಣಸಿನಕಾಯಿ, ½ ತೆಂಗಿನ ಕಾಯಿ, 20 ಕರಿಬೇವಿನ ಎಲೆ, ರುಚಿಗೆ ತಕ್ಕಷ್ಟು ಉಪ್ಪು.

**ಮಾಡುವ ವಿಧಾನ:** ಅಕ್ಕಿ ಹಾಗೂ ತೆಂಗಿನ ತುರಿಯನ್ನು ಬಿಟ್ಟು ಉಳಿದೆಲ್ಲ ಸಾಮಾನುಗಳನ್ನು ಒಂದು ಚಮಚ ಎಣ್ಣೆಯೊಂದಿಗೆ ಕೆಂಪಗೆ ಹುರಿದುಕೊಳ್ಳಿ. ಈಗ ತೆಂಗಿನ ತುರಿಯೊಂದಿಗೆ ಈ ಎಲ್ಲ ಮಸಾಲೆಯನ್ನು (ಹುರಿದ) ಹಾಕಿ ನಯವಾಗಿ ರುಬ್ಬಿಕೊಳ್ಳಿ. ಮೂರ್‍ನಾಲ್ಕು ಗಂಟೆಗಳ ಕಾಲ ನೆನೆಸಿದ ಅಕ್ಕಿಯನ್ನು ನುಣ್ಣಗೆ ರುಬ್ಬಿ ಅಕ್ಕಿ ಮಸಾಲೆ ಹಿಟ್ಟನ್ನು ಒಂದೇ ಪಾತ್ರೆಗೆ ಹಾಕಿ ರುಚಿಗೆ ಬೇಕಾದಷ್ಟು ಉಪ್ಪು ಸೇರಿಸಿ ಚೆನ್ನಾಗಿ ಕಲಸಿ ಇಡಿ. ಇದು ಚೆನ್ನಾಗಿ ಹುದುಗಲು (ಹುಳಿ) ಬರಬೇಕು.

ಈಗ ಬದನೆಕಾಯಿಯ ಸಿಪ್ಪೆಯನ್ನು ತೆಗೆದು ತೆಳುವಾಗಿ ಬಿಲ್ಲೆಯನ್ನಾಗಿ ಕತ್ತರಿಸಿ ನೀರಿನ ಪಾತ್ರೆಯಲ್ಲಿ ಹಾಕಿಡಿ. ಈಗ ಹುದುಗು ಬಂದ ಹಿಟ್ಟಿನಲ್ಲಿ ಈ ಬಿಲ್ಲೆಗಳನ್ನು ಒಂದೊಂದಾಗಿ ಅದ್ದಿ ಕಾದ ಕಾವಲಿಗೆ ಎಣ್ಣೆ ಹಚ್ಚಿ ನೀಟಾಗಿ ಜೋಡಿಸುತ್ತ ಬನ್ನಿ. ಕಾವಲಿ ತುಂಬ ಹಚ್ಚಬೇಕು. ಒಂದರ ಮೇಲೆ ಒಂದನ್ನು ಇಡಬಾರದು. ಮೇಲೆ ಸ್ವಲ್ಪ ಹಿಟ್ಟನ್ನು ಹಾಕಿ ಸಮನಾಗಿ ಸವರಿ ಮೇಲೆ ಒಂದೆರಡು ಚಮಚ ಎಣ್ಣೆ ಹಾಕಿ ಸಣ್ಣ ಉರಿಯಲ್ಲಿ ಕೆಂಪಗೆ ಬೇಯಿಸಬೇಕು. ಎರಡು ಕಡೆ ಹೊಂಬಣ್ಣಕೆ ಬೇಯಿಸಬೇಕು. ಬಿಸಿ ಇರುವಾಗಲೆ ತಿನ್ನಬೇಕು. ಅದರ ರುಚಿ ತಿಂದವರೆ ಹೇಳಬೇಕು. ಮಾಡಿ ತಿಂದು ಬರೀತೀರಿ ತಾನೆ?

**ವಿ. ಸೂ:** ರುಬ್ಬಿದ ಹಿಟ್ಟನ್ನು ನಾಲ್ಕು ಗಂಟೆಗಳ ನಂತರ ದೋಸೆ ಮಾಡಬಹುದು.

**—ಕಮಲಾಮೂರ್ತಿ, ತುಮಕೂರು**

ಮಿನಿಕಥೆ:

# ಪರೀಕ್ಷೆ



—ಕೆ.ಎಸ್. ವತ್ಸಲಾ ವಿಶ್ವನಾಥ್

ಬೆಳಗ್ಗೆ ಎದ್ದೊಡನೆ ಪೇಪರಿನತ್ತ ಕಣ್ಣಾಡಿಸಿದ ಕುಪ್ಪುಸ್ವಾಮಿಗೆ ತಲೆ ತಿರುಗಿ ಬೀಳುವಂತಾಯ್ತು. "ಕಾವೇರಿ ಜಲ ವಿವಾದದ ಹಿನ್ನೆಲೆಯಲ್ಲಿ ರಾಜ್ಯಾದ್ಯಂತ ಗಲಭೆ—ಚಾಮರಾಜ ನಗರ, ಕೊಳ್ಳೆಗಾಲ, ಟಿ. ನರಸೀಪುರಗಳಲ್ಲಿ ವ್ಯಾಪಕ ಹಿಂಸಾಚಾರ. ಭಾಷಾ ಅಲ್ಪಸಂಖ್ಯಾತರ ಮೇಲೆ ದೌರ್ಜನ್ಯ"...ತಮಿಳರ ಮನೆಗಳಿಗೆ, ಅಂಗಡಿಗಳಿಗೆ ಬೆಂಕಿ ಅಪಾರವಾದ ಹಾನಿ...

ಓದುತ್ತಾ, ಓದುತ್ತಾ ಅವನ ಕೈನಿಂದ ಪೇಪರ್ ಕೆಳಕ್ಕೆ ಜಾರಿಬಿತ್ತು. ಮನಸ್ಸು ಊರಿನಲ್ಲಿ ಅಸಹಾಯಕ ಸ್ಥಿತಿಯಲ್ಲಿರುವ ತನ್ನ ತಂದೆ, ತಾಯಿಯರ ಕಡೆ ಹಾರಿತು. 'ಅಯ್ಯೋ! ಎಂತಹ ಪರಿಸ್ಥಿತಿಯಿದು! ಇಂತಹ ಪರಿಸ್ಥಿತಿಯಲ್ಲಿ ಅವರನ್ನು ಒಂಟಿಯಾಗಿ ಬಿಟ್ಟು ಅಂಗಡಿ ವ್ಯಾಪಾರದ ನಿಮಿತ್ತ ಇಲ್ಲಿಗೆ ಬಂದ ತನ್ನನ್ನೇ ಶಪಿಸಿಕೊಂಡ. ತನ ಗಾದರೂ ಈ ರೀತಿ ಪ್ರಸಂಗಗಳು ವಿಕೋಪಕ್ಕೆ ತಿರುಗಬಹುದೆಂದು ಗೊತ್ತಿತ್ತೇ? ತಾನು ಊರಿಂದ ಹೊರಟಾಗ ಎಲ್ಲವೂ ಶಾಂತವಾಗೇ ಇತ್ತು. ಎಲ್ಲೋ ರಾಜ್ಯದ ಕೆಲವೆಡೆಗಳಲ್ಲಿ ಅಲ್ಪ ಸ್ವಲ್ಪ ಪ್ರಕ್ಷುಬ್ಧ ಪರಿಸ್ಥಿತಿ ಇದ್ದುದನ್ನು ಬಿಟ್ಟರೆ ಮಿಕ್ಕಡೆ ಶಾಂತ ಪರಿಸ್ಥಿತಿಯೇ ಇತ್ತು. ತಾನು ಊರಲ್ಲಿಲ್ಲ ದಿರುವಾಗಲೇ ಈ ಭೀಕರ ಕಾಡ್ಗಿಚ್ಚು ತನ್ನೂರಿ ನಲ್ಲೂ ತನ್ನ ಕೆನ್ನಾಲಿಗೆಯನ್ನು ಚಾಚಬೇಕಿತ್ತೇ?

ಓಹ್? ತನ್ನ ಮನೆ, ಅಂಗಡಿಗಳು ಈ ವೇಳೆಗೆ ಸುಟ್ಟು ಭಸ್ಮವಾಗಿರುತ್ತವೆ. ಅಪ್ಪ, ಅಮ್ಮನ ಪರಿಸ್ಥಿತಿ ಹೇಗಿದೆಯೋ? ಮುಂದಿನದನ್ನು ಯೋಚಿಸಲು ಭಯವಾಯಿತು. ಹೊಟ್ಟೆಯ ಲ್ಲೆಲ್ಲಾ ಕೆಟ್ಟ ಸಂಕಟವಾಗಿ ಮೇಲೆದ್ದು ನೀರು ಕುಡಿದು ಬಂದ. ಮೊದಲೇ ತನ್ನ ಪಕ್ಕದ ಮನೆಯ ರಾಜಗೋಪಾಲನಿಗೆ ತನ್ನ ಮೇಲೆ ಕಣ್ಣು. ಊರಿನ ಪುಂಡ ಪೋಕರಿಗಳೊಡನೆ ಸದಾ ಅಲೆಯುವ ಅವನನ್ನು ಕಂಡರೆ ಕುಪ್ಪುವಿಗೆ ಏನೋ ಅಸಹ್ಯ ಭಾವನೆ. 'ಪರನಾಡಿನಿಂದ ಬಂದು ತಳವೂರಿ ನಮ್ಮ ತಲೆ ಮೇಲೇ ಮೆರೀತಾರೆ' ಎಂದು ಅವರಿವ ರೊಡನೆ ಹೇಳುವುದನ್ನು ಎಷ್ಟೋಸಲ ಕೇಳಿದ್ದಾನೆ ಕುಪ್ಪು. ತಲೆಮಾರಿನವರ್ಯಾರಿಗೋ ತಮಿಳನೊಬ್ಬ ದ್ರೋಹ ಬಗೆದು ಓಡಿ ಹೋಗಿದ್ದನ್ನೇ ನೆಪ ಮಾಡಿಕೊಂಡು ಸದಾ ಉರಿಯುತ್ತಿರುತ್ತಾನೆ. ಸಮಯ ಸಿಕ್ಕಾಗಲೆಲ್ಲಾ ಮಾತಿನಲ್ಲೋ, ಕೃತಿಯಲ್ಲೋ ತನ್ನ ದ್ವೇಷವನ್ನು ಸಾಧಿಸಿಕೊಳ್ಳುವ ರಾಜಗೋಪಾಲ ಇನ್ನು ಇಂತಹ ಸುಸಮಯವನ್ನು ಬಿಟ್ಟಾನೇ? ಇಂತಹ ಗಲಭೆಗಳಲ್ಲಿ ಮೂಲಕಾರಣ ನೆಪವಷ್ಟೇ. ಅದರ ನೆರಳಲ್ಲಿ ತಮ್ಮ ವೈಯಕ್ತಿಕ ದ್ವೇಷಾ ಸೂಯೆಗಳನ್ನು ತೀರಿಸಿಕೊಳ್ಳುವ ಮಂದಿಯೇ ಹೆಚ್ಚು.

ಯಾರೋ ಮಾಡಿದ ತಪ್ಪಿಗೆ ಬಡಪಾಯಿ ಗಳನ್ನು ಹಿಂಸಿಸುವ ಈ ಹುಚ್ಚು ಆವೇಶವೇ ಭಾಷಾಭಿಮಾನವೇ? ಯಾವ ಭಾಷೆ, ದೇಶವಾದ ರೇನು, ಎಲ್ಲರ ಸಂಕಟ, ನೋವು ಒಂದೇ ಅಲ್ಲವೆ? ಇಂತಹ ರಾಕ್ಷಸೀ ಕೃತ್ಯಕ್ಕೆ ಕೊನೆಯೆಂದು? ಎಂದು ಚೀರಿಟ್ಟ ಮನ ನೋವಿನಿಂದ ಭಾರವಾಯಿತು.

ಇನ್ನು ತಡಮಾಡುವಂತಿಲ್ಲ. ತಾನು ಹೇಗಾದರೂ ಊರು ಸೇರಲೇಬೇಕು. ಅಂಗಡಿ ಮನೆಗಳು ನಾಶ ವಾದರೂ ಚಿಂತೆಯಿಲ್ಲ. ಅಪ್ಪ, ಅಮ್ಮನ ಪರಿಸ್ಥಿತಿ ಹೇಗೋ ಏನೋ? ಜೀವಂತವಾಗಿರುವರೋ ಇಲ್ಲವೋ? ಕೆಟ್ಟ ಯೋಚನೆಗಳಿಂದ ದುಃಖ ಒತ್ತರಿಸಿ ಬಂತು.

ಊರಿಗೆ ಹೋಗುವುದು ಹೇಗೆ? ರೈಲು, ಬಸ್ಸುಗಳಿಲ್ಲ. ಅಲ್ಲೊಂದು ಇಲ್ಲೊಂದು ಓಡಾಡು ತ್ತಿರುವ ವಾಹನಗಳನ್ನೂ ನಿಲ್ಲಿಸಿ ಬೆಂಕಿ ಹಚ್ಚು ತ್ತಿರುವರಂತೆ ಹೇಗಾದರೂ ಊರು ಸೇರುವ ನಿರ್ಧಾರದಿಂದ ಭಂಡ ಧೈರ್ಯದಿಂದಲೇ ಹೊರಟ. ಅಂತೂ ಇಂತೂ ಕಷ್ಟಪಟ್ಟು ಸಿಕ್ಕಿದ ಲಾರಿಯಲ್ಲಿ ಟಿ. ನರಸೀಪುರಕ್ಕೆ ಬರುವ ವೇಳೆಗಾಗಲೇ, ಸಂಜೆ ಕಳೆದು ಕತ್ತಲು ಕವಿಯುತ್ತಿತ್ತು. ಮತ್ತೊಂದು ಆಘಾತ! ತಮಿಳುನಾಡಿನ ಬೋರ್ಡಿದ್ದ ಇವರ ಲಾರಿ ಕಣ್ಣೆದುರಿನಲ್ಲೇ ಆವೇಶಭರಿತ ಗುಂಪೊಂದರ ಅಗ್ನಿಗೆ ಆಹುತಿಯಾಯಿತು. ಭಯಭೀತಿಗಳಿಂದ ತಲ್ಲಣಿಸಿ ಹೋದ ಕುಪ್ಪು. ಇದೇನೀ ಪೈಶಾಚಿಕ ಕೃತ್ಯ? ಸದ್ಯ! ಒಳಗಿದ್ದ ಮಂದಿಯನ್ನು ಕೆಳಗಿಳಿಸಿ ಅನಂತರ ಬೆಂಕಿಯಿಟ್ಟ ಜನಗಳ ಮಾನವೀಯತೆ ಯನ್ನು ಕೊಂಡಾಡಬೇಕಷ್ಟೆ ಈಗ.

ಭಯಭೀತಿಗಳ ನೆರಳಿನಲ್ಲೇ ಯಾರೋ ಪುಣ್ಯಾತ್ಮರ ದಯೆಯಿಂದಾಗಿ ಊರನ್ನು ತಲುಪಿದ ಕುಪ್ಪು ಬೆಚ್ಚಿದ. ಎಲ್ಲೆಲ್ಲೂ ಸ್ಮಶಾನ ಮೌನ. ಅರೆ ಸುಟ್ಟ, ಕಿಟಕಿ ಗಾಜುಗಳು, ಒಡೆದ, ಹಾರು ಹೊಡೆದ ಬಾಗಿಲುಗಳ ಮನೆ, ಅಂಗಡಿ ಮುಂಗಟ್ಟು ಗಳು ನಡೆದ ಕಥೆಗೆ ಸಾಕ್ಷಿಯಾಗಿ ನಿಂತಿವೆ.

ಅರೆಬರೆ ಸುಟ್ಟು, ಅನಾಥವಾಗಿ ನಿಂತಿದ್ದ ತನ್ನ ಮನೆಯ ಬಳಿ ಬರುತ್ತಿದ್ದಂತೆಯೇ ಕುಪ್ಪುವಿನ ಅಂತರಂಗದಲ್ಲಿ ಹೆಪ್ಪುಗಟ್ಟಿದ್ದ ದುಃಖವೆಲ್ಲಾ ಕಟ್ಟೆ ಯೊಡೆಯಿತು. ಅಯ್ಯೋ! ತನ್ನ ಊಹೆ ನಿಜ ವಾಗಿಯೇ ಬಿಟ್ಟಿತಲ್ಲಾ. ಏನು ಗತಿ? ಕುಪ್ಪು ತತ್ತರಿಸಿ ರಾಜಗೋಪಾಲನ ಮನೆಯ ಹೊಸ್ತಿಲ ಬಳಿ ಧೊಪ್ಪನೆ ಬಿದ್ದುಬಿಟ್ಟ.

ಬಿದ್ದ ಸದ್ದಿಗೆ ಗಾಬರಿಯಿಂದ ಬಾಗಿಲು ತೆರೆದ, ರಾಜಗೋಪಾಲನ ತಾಯಿ ಅವಾಕ್ಕಾದರು. ಅರೇ 'ಕುಪ್ಪು, ಇದೇನು ನಿನ್ನ ಅವಸ್ಥೆ? ಇಷ್ಟು ಗುಲಾಟೆಯಲ್ಲಿ ಬೆಂಗಳೂರಿಂದ ಹೇಗೆ ಬಂದೆ ಯಪ್ಪಾ? ಬಾ...ಬಾ...ಒಳಕ್ಕೆ ಬಾ."

ರಾಜಗೋಪಾಲನ ತಂದೆ ಗದರಿದರು. 'ಸ್ವಲ್ಪ ಮೆಲ್ಲಗೆ ಮಾತಾಡೇ. ಸುಮ್ಮನೆ ಗಲಾಟೆ ಮಾಡಿದರೆ ಇಲ್ಲದ ರಂಪಕ್ಕೆ ಕಾರಣವಾಗತ್ತೆ."

"ಅಮ್ಮಾ, ನಮ್ಮ ತಂದೆ, ತಾಯಿಯವರೆಲ್ಲಿ? ನಮ್ಮ ಮನೆ ಸುಟ್ಟು"..."ಕುಪ್ಪು ಸಮಾಧಾನ ಮಾಡಿಕೋ. ಇಗೋ ನೋಡು, ನಿಮ್ಮ ತಂದೆ, ತಾಯಿಯವರಿಬ್ಬರೂ ಇಲ್ಲೇ ಸುರಕ್ಷಿತವಾಗಿದ್ದಾರೆ. ಅಂಗಡಿಯ ದಾಸ್ತಾನು ಎಲ್ಲಾ ನಮ್ಮ ಮನೆಯಲ್ಲಿ ಸುರಕ್ಷಿತವಾಗಿದೆ. ಗಲಭೆಯ ಸುಳಿವು ಸಿಕ್ಕುತ್ತಲೇ ನಮ್ಮ ರಾಜು ಆಳುಗಳಿಂದ ಎಲ್ಲಾ ಇಲ್ಲಿ ಸಾಗಿಸಿಬಿಟ್ಟ. ಆದರೆ ಅಂಗಡಿ ಮನೆಯನ್ನು ಮಾತ್ರಾ ನಮ್ಮಿಂದ ಉಳಿಸಿಕೊಳ್ಳಲಾಗಲಿಲ್ಲಪ್ಪಾ, ಉದ್ರಿಕ್ತ ಜನರನ್ನು ತಡೆಗಟ್ಟಲು ಸಾಧ್ಯವಾಗದೇ ಹೋಯಿತು."

"ಕುಪ್ಪೂ, ಬಂದೆಯಾಪ್ಪಾ," ಅಪ್ಪ-ಅಮ್ಮಂದಿ ರಿಬ್ಬರನ್ನೂ ಅಪ್ಪಿ ಸಂತೈಸಿದ ಕುಪ್ಪು ಕೃತಜ್ಞತೆ ಯಿಂದ ಭಾರವಾದ ಧ್ವನಿಯಲ್ಲೆಂದ.

"ಅಮ್ಮಾ, ಏನೆಲ್ಲಾ ಕೆಟ್ಟ ಯೋಚನೆಗಳಿಂದ ಕಂಗೆಟ್ಟ ನನಗೆ ನೀವು ಆನಂದದ ಅಮೃತವನ್ನೇ ಸುರಿಸಿದ್ದೀರಿ. ನಿಮ್ಮ ಈ ಋಣವನ್ನು ನಾನು ಜನ್ಮ ಜನ್ಮಕ್ಕೂ ತೀರಿಸಬೇಕಾಗುವುದೇನೋ?"

ತನ್ನ ಕಾಲಬಳಿ ತಲೆಯಿಟ್ಟ ಕುಪ್ಪುವನ್ನು ತಡೆಯುತ್ತಾ ಆಕೆಯೆಂದರು. "ಇದೇನಿದು ಕುಪ್ಪನ್, ಹೀಗೆ ಮಾತಾಡುತ್ತಿರುವೆ! ಏನೋ ನಮ್ಮ ಕುಟುಂಬದ ಮಧ್ಯೆ ಅಲ್ಪಸ್ವಲ್ಪ ಮನಸ್ತಾಪ ವಿದ್ದುದು ನಿಜವೇ. ಆದರೂ ಇಂತಹ ಸಂದರ್ಭ ದಲ್ಲಿ ನಾವು ಮನುಷ್ಯತ್ವವನ್ನು ಮರೆಯುವುದಕ್ಕಾ ದೀತೇನು? ಏನೋ ನಮ್ಮ ರಾಜು ಪುಂಡನೇ ಇರಬಹುದಾದರೂ ಎಲ್ಲರೂ ತಿಳಿದಿರುವಂತೆ ಮಾನವೀಯತೆಯನ್ನು ಮರೆಯುವಷ್ಟು ಕೆಟ್ಟವ ನಲ್ಲಪ್ಪಾ." ಆ ತಾಯಿಯ ಕೊನೆಯ ಮಾತುಗಳು ಕುಪ್ಪುವಿನ ಅಂತರಂಗವನ್ನು ನೇರವಾಗಿ ಚುಚ್ಚಿದವು.

"ಹೌದಮ್ಮ. ಮನುಷ್ಯನ ನಿಜವಾದ ಅಂತಃ ಸ್ಸತ್ವದ ಪರೀಕ್ಷೆಯಾಗುವುದೇ ಇಂತಹ ಸಂದರ್ಭ ದಲ್ಲಿ" ಹೃದಯ ತುಂಬಿ ನುಡಿದ ಕುಪ್ಪುವಿನ ಮನದ ಮೂಲೆಯೊಂದರಲ್ಲಿ ರಾಜಗೋಪಾಲನ ವ್ಯಕ್ತಿತ್ವ ಎತ್ತರೆತ್ತರಕ್ಕೆ ಬೆಳೆದು ನಿಂತಿತು. **

# ದಾನಿಗಳು



— ಪದ್ಮಾಗುರುರಾಜ್

"ಹೇಗಿದ್ದೀಯಾ... ವಸುಧಾ...?"

ವಸುಧಾಳ ಕಾಂತಿಹೀನ ಕಣ್ಣುಗಳಲ್ಲಿ ಬೆಳಕು ಚಿಮ್ಮಿತು. ಹತ್ತು ವರ್ಷಗಳ ನಂತರ—ಕಾಲೇಜು ದಿನಗಳ ಪ್ರೇಮಿ...ಗೆಳೆಯ...ದಿವಾಕರ. ಆಸ್ಪತ್ರೆಯ ಕಾರಿಡಾರಿನಲ್ಲಿ ಭೇಟಿಯಾಗಿದ್ದ.

"ಓ...ದಿವೂ...ಏನು ನೀನಿಲ್ಲಿ...?"

ಕುಶಲ ಪ್ರಶ್ನೆಗಳಾದವು... "ಹತ್ತು ವರ್ಷಗಳಲ್ಲಿ ಏನೆಲ್ಲ ನಡೆದುಹೋದುವಲ್ಲ...ವಸೂ..." ದಿವಾಕರ ಭಾರವಾದ ಉಸಿರೆಳೆದ...

"ಅದೂ...ಇಲ್ಲಿ ಈ ಸ್ಥಿತೀಲಿ ನಾವು ಭೇಟಿಯಾಗ್ತಿದೀವಿ...ಅಂದ್ರೆ...ನಂಬೋಕೆ ಆಗ್ತಿಲ್ಲ."

"ಹೋಗಲಿ...ನಿನ್ನ ವಿಷಯ ಹೇಳು?" ದಿವಾಕರನ ಕಾತರದ ಪ್ರಶ್ನೆ...

ವಸುಧಾ ಹೇಳುತ್ತ ಹೋದಳು...ದಿವಾಕರನ ಹಣೆಯ ಗೆರೆಗಳು ಆಳವಾದುವು...

"ಏನು ಹೇಳಲಿ...? ಜಾತಿಯ ಭೂತ ನಮ್ಮಿಬ್ಬರ ಮಧ್ಯೆ ಗೋಡೆಕಟ್ಟಿ ಬೇರೆ ಮಾಡಿತು. ನಾಗರಾಜರ ಜೊತೆ ಮದುವೆ ಶಾಸ್ತ್ರ ಆಯಿತು... ಜೊತೆಗೆ ಬಂಜೆ ಅನ್ನೋ ಶಾಸನ ಸಿಕ್ಕಿತು. ಕಾರಣ ವೀರ್ಯಾಣುಗಳ ಕೊರತೆ ಆತನಲ್ಲಿ... ಗಾಯದ ಮೇಲೆ ಬರೆ ಎಳೆದಂತೆ... ಇವರಿಗೆ ಮೂತ್ರಪಿಂಡದ ಕಾಯಿಲೆ ಬೇರೆ ಈ ಚಿಕ್ಕವಯಸ್ಸಿನಲ್ಲೇ ಗಂಟುಬಿದ್ದಿದೆ. ಎರಡು ಮೂತ್ರಪಿಂಡಗಳು... ಸರ್ರ್ಯಾಗಿ ಕೆಲಸಮಾಡ್ತಿಲ್ಲವಂತೆ... ತಿಂಗಳಿಗೆ ಎರಡು ಸಲ 'ಡಯಾಲಿಸಿಸ್' ಮಾಡಿಸಬೇಕು...ಅದಕ್ಕೇ ಈ ಆಸ್ಪತ್ರೆಗೆ ನಮ್ಮದು ನಿರಂತರ ಯಾತ್ರೆ..."

"ಮುಂದೇನು? ಎಷ್ಟು ದಿವಸಾಂತ ಹೀಗೆ?" ದಿವಾಕರ ತನ್ನವಳಾಗಬೇಕಿದ್ದ ವಸುಧಾಳ ದಯನೀಯ ಸ್ಥಿತಿಗಾಗಿ ಮರುಗಿದ...

"ಒಂದು ಕಿಡ್ನಿಯನ್ನಾದರೂ, ಯಾರಿಂದಲಾದ್ರೂ ದಾನ ಪಡೆದು ಇವರಿಗೆ ಅಳವಡಿಸಿದರೆ...ಅದೃಷ್ಟವಿದ್ದರೆ ಎಲ್ಲ ಸರಿಯಾಗಬಹುದೂಂತ ತಜ್ಞ ವೈದ್ಯರು ಹೇಳ್ತಾರೆ—ಆದರೆ ನನ್ನದು ಇವರಿಗೆ ಹೊಂದುವುದಿಲ್ಲವಂತೆ. ಮತ್ತೆ ಬೇರೆ ದಾನಿಗಳು ಸಿಗುತ್ತಿಲ್ಲ...ಹಣ ಕೊಟ್ಟುಕೊಳ್ಳುವ ಶಕ್ತಿ ನಮಗಿಲ್ಲ. ಈಗಾಗಲೇ ಡಯಾಲಿಸಿಸ್‌ಗೆ ಸಾವಿರಾರು ರೂಪಾಯಿ ತೆತ್ತು...ಬರಿಗೈ ಆಗಿದೆ. ಇವರ ರಜೆ ಸಹ ಮುಗಿದು ಹೋಗಿ ಅರ್ಧಸಂಬಳದ ಮೇಲೆ ಬದುಕು ಸಾಗ್ತಾ ಇದೆ. ಪತ್ರಿಕೆಗಳಲ್ಲೂ ಸಹಾಯಕ್ಕಾಗಿ ಯತ್ನಿಸಿದೆವು. ಹೆಚ್ಚಿನ ಪ್ರಯೋಜನವೇನಾಗಲಿಲ್ಲ."

ವಸುಧಾ ಕಣ್ಣೊರೆಸಿಕೊಂಡಳು.

ದಿವಾಕರ ವಸುಧಳಿಗೆ ಸಾಂತ್ವನದ ತಂಪೆರೆದ...

ಮತ್ತೆ ಭೇಟಿಯಾದಾಗ ದಿವಾಕರ...ಹೇಳಿದ... "ನಾನು, ನನ್ನ ಕಿಡ್ನಿಯೊಂದನ್ನು ದಾನ ಕೊಡುವೆ" ಎಂದಾಗ ವಸುಧಾ ಕೃತಜ್ಞತೆಯ ಭಾರದಿಂದ ಮೂಕಳಾದಳು...

"ಆದರೆ...ನನ್ನದೂ ಒಂದು ಸಮಸ್ಯೆ ಇದೆ... ನನ್ನ ಹೆಂಡತಿ ಕುಸುಮಳಿಗೆ ಗರ್ಭಕೋಶದಲ್ಲಿ ತೊಂದರೆಯಿರುವ ಕಾರಣ ನಮಗೆ ಮಕ್ಕಳಾಗುವ ಸಾಧ್ಯತೆಯೇ ಇಲ್ಲ. ನೀನು ಸಹಾಯ ಮಾಡುವದಾದರೆ?"

"ಅಂದರೆ?"

"ನೀನು ನಮಗೊಂದು ನನ್ನದೇ ಆದ ಮಗುವನ್ನು ಹೆತ್ತು ಕೊಟ್ಟು, ನನ್ನ ಮನೆ ಬೆಳಕು ಮಾಡುವುದಾದರೆ, ನನ್ನ ಮೂತ್ರಪಿಂಡವೊಂದನ್ನು ದಾನ ಮಾಡಲು ರೆಡಿ...ಜೊತೆಗೆ ಆ ಮಗು ನಮ್ಮಿಬ್ಬರ ಪ್ರೇಮದ ಸಂಕೇತವಾಗಿ, ನಮ್ಮ ಬಾಂಧವ್ಯವೂ ಗಟ್ಟಿಯಾಗುತ್ತದೆ..."

"ಇದಕ್ಕೆ ನಿನ್ನ ಹೆಂಡತಿ...?" ವಸುಧಾ ವಿಭ್ರಾಂತಳಾಗಿ ಕೇಳಿದಳು.

"ಒಪ್ಪಿಸಿದ್ದೇನೆ..."

ವಸುಧಾ...ಎರಡು ದಿನ ಅಳೆದೂ ಸುರಿದೂ, ವಿಚಾರ ಮಾಡಿದಳು. ನಾಗರಾಜನಲ್ಲೂ ಪ್ರಸ್ತಾಪ ಮಾಡಿದಳು...ಆತ ಈ ಸೃಷ್ಟಿಕ್ರಿಯೆ ವೈಜ್ಞಾನಿಕ ರೀತಿಯಲ್ಲಾಗುವುದಾದರೆ ಅಭ್ಯಂತರವಿಲ್ಲವೆಂದ.

ದಿವಾಕರನ ಕಿಡ್ನಿ...ನಾಗರಾಜನ ಶರೀರಕ್ಕೆ ಹೊಂದಿಕೊಂಡಿತು...ಶಸ್ತ್ರಕ್ರಿಯೆ ನಡೆದು ಆತ ಹೊಸ ಮನುಷ್ಯನಾದ. ವಸುಧಾ ಈಗ ನಾಲ್ಕು ತಿಂಗಳ ಗರ್ಭಿಣಿ...ಅವಳ ಎದೆಯಲ್ಲಿ ಈಗ ಯುದ್ಧವೇ ನಡೆದಿತ್ತು...ಅವಳು ಇದಕ್ಕೆ ಒಪ್ಪಿಕೊಂಡ ಮುಖ್ಯ ಕಾರಣ...ಮಗು ತನಗೆ ದಕ್ಕದಿದ್ದರೂ ತನಗೆ ಈ ಜನ್ಮದಲ್ಲಿ ಅಲಭ್ಯವಾದ ಗರ್ಭಿಣಿಯ, ತಾಯ್ತನದ ಅಲೌಕಿಕ ಅನುಭವ, ಆನಂದ ಪಡೆಯುವಷ್ಟೇ ಆಗಿತ್ತು. ಆದರೆ ದಿನಗಳೆದ ಹಾಗೆ...ಈ ಕೂಸು... ತನ್ನದಲ್ಲ, ತನಗೆ ಅದು ಉಳಿಯುವುದಿಲ್ಲ....ತಾನದರ ಬಾಡಿಗೆ ತಾಯಿ ಮಾತ್ರ ಎಂಬ ವಾಸ್ತವ...ಅವಳ ಜೀವವನ್ನು ಹಿಡಿದು ಅಲುಗಾಡಿಸುತ್ತಿತ್ತು...ದಿವಾಕರ ಎಷ್ಟೋ ರೀತಿ ಸಮಾಧಾನ ಹೇಳಿದ...'ಮಗೂ ನಮ್ಮಿಬ್ಬರದೂ ಆಗಿರುತ್ತದೆ. ನೀನು ಬೇಕೆಂದಾಗಲೆಲ್ಲ...ಮಗುವನ್ನು ನೋಡಬಹುದು...ಆಡಿಸಬಹುದು...' ಎಂದು ಹೇಳಿದರೂ ಅವಳ ಅಳಲು, ವೇದನೆ ಕಡಿಮೆಯಾಗಲಿಲ್ಲ...ತಿಂಗಳುಗಳು ಕಳೆದಂತೆ 'ಮಗು ತನ್ನದೇ. ಅದರ ಪೂರ್ಣ ಹಕ್ಕು ತನ್ನದೆ...ತಾನದನ್ನು ಯಾರಿಗೂ ಕೊಡಲಾರೆ...' ಎಂಬ ಭಾವನೆ ಅವಳಲ್ಲಿ ಪುಟಿಯತೊಡಗಿತ್ತು...

ಆದರೆ ಮತ್ತೊಮ್ಮೆ ವೈದ್ಯಕೀಯ ತಪಾಸಣೆಗೆ ಹೋದಾಗ, ಈ ಎಲ್ಲ ತಳಮಳ ಸಂದಿಗ್ಧಗಳೂ ಶಾಂತವಾಗಿತ್ತು. ಸ್ಕ್ಯಾನಿಂಗ್ ಮಾಡಿದಾಗ, ವಸುಧಾಳಲ್ಲಿ ಅವಳಿ ಮಕ್ಕಳು ಬೆಳೆಯುತ್ತಿರುವುದು ಖಚಿತವಾಯಿತು...ಆನಂದದಿಂದ ದಿವಾಕರ... "ವಸೂ...ನಿನ್ನ ಅದೃಷ್ಟ ದೊಡ್ಡದು...ಎರಡು ಮಕ್ಕಳಲ್ಲಿ ಮೊದಲ ಆಯ್ಕೆ ನಿನ್ನದೇ...'

"ನೀನು ಬಿಟ್ಟು ಕೊಟ್ಟದ್ದೇ ನನಗೆ ಪ್ರಸಾದ ಎಂದುಕೊಳ್ಳುವೆ..."ಎಂದಾಗ ವಸುಧ ಆಗಲೇ ತಾಯ್ತನದ ಸ್ವಪ್ನಲೋಕದಲ್ಲಿ ವಿಹರಿಸುತ್ತಿದ್ದಳು. ●



ಸುಮನ್: 13-4-1991
ತಾಯಿ: ಸುಧಾ ಅಶೋಕ ಚಿತ್ರಗಿ, ಬಾಗಲಕೋಟೆ



ಚಿನ್ಮಯಿ: 16-4-1991 ತಾಯಿ: ಸುಮ ನಾಗರಾಜ್, ಮೈಸೂರು

ಫರ್‌ಝಾನ: 16-4-1991
ತಾಯಿ: ನಸೀರಿ ಸಮದ್ ಮಸ್ಕಟ್

# ಹುಟ್ಟಿದ ಹಬ್ಬ



ಸುಮನ್: 10-4-1991 ತಾಯಿ: ರಂಗಲಕ್ಷ್ಮಿ ಗೋಪಾಲರಾವ್, ಬೆಂಗಳೂರು



ಅಗ್ರಜ್: 4-4-1991
ತಾಯಿ: ಪರಿಣಿತಾ ಅನಿಲಕುಮಾರ್, ಮೈಸೂರು



ಕುಮಾರ ವಿನಾಯಕ ಚಂದ್ರಕಾಂತ
ಅತ್ನಿಗೇರಿ: 9-4-1991
ತಾಯಿ: ಶೋಭಾ ಚ. ಅತ್ನಿಗೇರಿ



ದಿಲೀಪ್: 2-4-1991
ತಾಯಿ: ಭಾಗ್ಯ ಮಂಜುನಾಥ, ಬಾಗೇಪಲ್ಲಿ



# ವನಿತಾ ಪದಸಂಪದ

ರೂ. 250 ಬಹುಮಾನ!

44

## ನಿಬಂಧನೆಗಳು

ಮಹಿಳೆಯರ ಸ್ಮರಣ ಶಕ್ತಿಗೆ ಹೊಸ ಹರಿತವನ್ನೊದಗಿಸಿ, ಸೀಮಿತ ಚೌಕಟ್ಟಿನಲ್ಲಿ ಬೇರೆ ಬೇರೆ ವಿಷಯಗಳ ಕಿರು ಪರಿಚಯ ನೀಡುವ **ವನಿತಾ ಪದಸಂಪದ** ಶಬ್ದ ಸಂಪತ್ತಿಗೆ ಒಂದು ಪರೀಕ್ಷೆ ಕೂಡ. ಮನರಂಜನೆಯೊಂದಿಗೆ ಮನೋವಿಕಾಸಕ್ಕೂ ಸಹಾಯಕವಾಗಿರುವ, ಮಹಿಳೆಯರು ಮಾತ್ರ ಪಾಲ್ಗೊಳ್ಳಲು ಅವಕಾಶವಿರುವ ವಿಶಿಷ್ಟ ಸ್ಪರ್ಧೆ.

ಆಧಾರಗಳನ್ನು ಅನುಸರಿಸಿ ನಿಮ್ಮ ಉತ್ತರಗಳನ್ನು ಪಕ್ಕದ **ವನಿತಾ ಪದಸಂಪದ** ಚೌಕದಲ್ಲಿ ಭರ್ತಿ ಮಾಡಿ 1992ರ ಏಪ್ರಿಲ್ 25 ನೇ ದಿನಾಂಕದೊಳಗೆ "ವನಿತಾ ಪದಸಂಪದ, ಚಂದಮಾಮ ಬಿಲ್ಡಿಂಗ್ಸ್, ಮದರಾಸು–600 026" ಈ ವಿಳಾಸಕ್ಕೆ ಕಳುಹಿಸಿರಿ. ಉತ್ತರ **ವನಿತಾ ಪದಸಂಪದ** ಚೌಕದಲ್ಲಿರಬೇಕಾದುದು ಅವಶ್ಯ. ಸರಿಯಾದ ಉತ್ತರಕ್ಕೆ ಬಹುಮಾನ.

ಲಕೋಟೆಯಲ್ಲಿ "ವನಿತಾ ಪದಸಂಪದ" ಚೌಕದ ಹೊರತು ಬೇರೇನೂ ಇರಕೂಡದು. ಒಂದು ಲಕೋಟೆಯಲ್ಲಿ ಒಂದೇ ಪ್ರವೇಶಿಕೆ ಇರಬೇಕು. ಚೌಕಗಳಲ್ಲಿರುವ ಅಕ್ಷರಗಳು ಸ್ಪಷ್ಟವಾಗಿ ತಿಳಿಯುವಂತಿದ್ದು ಚಿತ್ತುಗಳೂ, ತಿದ್ದುಪಡಿಗಳೂ ಇರಬಾರದು. ಇದರ ಸರಿಯಾದ ಉತ್ತರವನ್ನು 1992ರ ಜೂನ್ 'ವನಿತಾ' ದಲ್ಲಿ ಪ್ರಕಟಿಸಲಾಗುತ್ತದೆ. ನಮ್ಮಲ್ಲಿರುವ ಉತ್ತರಗಳಿಗೆ ಸರಿಹೊಂದುವ ಉತ್ತರ ಕಳಿಸಿದವರಿಗೆ ರೂ. 250/– ಬಹುಮಾನ ನೀಡಲಾಗುತ್ತದೆ. ಸರಿಯಾದ ಉತ್ತರ ಕಳುಹಿಸಿದವರ ಸಂಖ್ಯೆ ಒಂದಕ್ಕಿಂತ ಹೆಚ್ಚಾಗಿದ್ದರೆ ಬಹುಮಾನದ ಹಣವನ್ನು ಹಂಚಲಾಗುತ್ತದೆ. ಹಾಗೂ ಬೇರೆ ಯಾವುದೇ ರೀತಿಯ ತೀರ್ಮಾನವನ್ನು ತೆಗೆದುಕೊಳ್ಳುವ ಅಧಿಕಾರ ಸಂಪಾದಕ ವರ್ಗಕ್ಕಿದ್ದು ಈ ವಿಷಯದಲ್ಲಿ ಪತ್ರ ವ್ಯವಹಾರಕ್ಕೆ ಅವಕಾಶವಿಲ್ಲ. 'ವನಿತಾ'ದಲ್ಲಿ ಕೆಲಸ ಮಾಡುವವರಾಗಲಿ ಅವರಿಗೆ ಸಂಬಂಧಿಸಿದವರಾಗಲಿ ಇದರಲ್ಲಿ ಭಾಗವಹಿಸುವಂತಿಲ್ಲ.

**ಎಡದಿಂದ ಬಲಕ್ಕೆ**

1. ಈ ತಿಂಗಳಿನ ಹಬ್ಬದಂದು ಉಣಬೇಕಾದ ಕಹಿ–ಸಿಹಿ (4)
4. ಮಾಯೆಗೆ ಒಳಗಾದವನು (4)
7. ಗಾಳಿಯಿಂದ ಮಾಡಿದ ಹೋಮ (3)
9. ಋಣ ತೀರಿಸಲೆಂದೇ ಮಳೆ ಸುರಿಸಿದಾತ (3)
10. ವೃಕ್ಷದಡಿ ಬಂದ ಸಾವು (3)
11. ಕೂದಲು ಹೆಣೆಯಲು ಬಳಸಿದ್ದು (3)
12. ತವರಿಗೆ ಹೋದಾಕೆ ತಂದ ಲೋಹ (3)
14. ಮಜ ತೆಗೆದುಕೊಳ್ಳುವ ಮನುಷ್ಯ (3)
16. ಮಾರು ದೂರ ಹೋದ ನಂತರವೇ ತಿಳಿದದ್ದು ಇದು ಸಾಮಾನ್ಯವೆಂದು (3)
18. ಅಶುಭವೇನಲ್ಲ ಬಿಡಿ ಈ ಪ್ರಾಣಿ (3)
20. ತನ್ಮಯನಾಗೇ ಇದ್ದು, ಅದರಲ್ಲೇ ಒಳಗಾಗಿರುವುದು (3)
22. ನಾಕಕ್ಕೆ ಹೋದ ಯಜಮಾನ (3)
23. ಶಿವ ಮಾಡಿದ ಆಶೀರ್ವಾದ (3)
25. ಮರಣ ಕಾಲಕ್ಕೆ ಬಂದ ಗಂಡ (3)
27. ಸಲುಹಲು ಬಂದದ್ದು ಜೀರ್ಣಗೊಂಡಿದೆ (4)
28. ದನವನ್ನು ಹಿಡಿತದಲ್ಲಿಡಲು ಹಾಕುವ ನೂಲಿನ ಎಳೆ (4)

**ಮೇಲಿನಿಂದ ಕೆಳಕ್ಕೆ :**

1. ಮಾಲೆ ಧರಿಸಿದರೇನು ಬೇಜಾರು (3)
2. ವಣಿಕ ಬಂದು ಕುಳಿತು ಆದ ಅಭಿವೃದ್ಧಿ (5)
3. ಮನಸ್ಸಿನ ಸ್ಥಿತಿ ಅಕ್ಕನ ಗಂಡನಿಗೆ ಗೊತ್ತು (2)
5. ಸಂಹಾರದ ಯಾಗದಂತಾದ ಅನೇಕ ಜನರ ಭೀಕರ ಕೊಲೆ (5)
6. ಕಲ ಕಲ ಎನ್ನುವ ತಾವರೆ (3)
7. ತುಂಬಾ ದುಡ್ಡು ಹೊಂದಿದ ಶ್ರೀಮಂತ (4)
8. ಮಸ್ಕಾ ಹೊಡೆಯಲು ಮಾಡುವ ನಮನ (4)
11. ಹಳೆಯದಾಗಿ ಕೆಟ್ಟುಹೋಗು (3)
13. ಪಶುಗಳು ನೋಡಬಲ್ಲ ಮೊಗ (3)
15. ವಾನರನ್ನು ಬೆಚ್ಚಿಸುವ ಆಳು (3)
17. ದುಃಖದಿಂದ ಅಂತ್ಯವಾಗುವ ರಂಗಾಭಿನಯ (5)
18. ಒಳ್ಳೆಯ ಕೈ ಹೊಂದಿರುವುದು ಮಂಗಳವಾಗಿದೆ (4)
19. ಅನ್ಯಾಯವಾಗಿ ಸಂಪಾದಿಸುವನ ಬಳಿ ಇರುವ ಕರಿ ಬಣ್ಣದ ದುಡ್ಡು (4)
20. ಶಿರವನ್ನು ಭೂಮಿಗೆ ಹಾಕಿ (5)
21. ಒಳ್ಳೆಯ ದ್ರವವನ್ನು ಸೇವಿಸುವ ರಾಜ (3)
24. ಈ ಮಗ ಕೆಟ್ಟ ಮನ್ಮಥ (3)
26. ಮಲಗು ಎಂದಾಗ ಎದ್ದ ಕೂಸು (2)

ಹೆಸರು ........................................

ವಿಳಾಸ ........................................

........................................

........................................

........................................

44

# ವಾರ್ತಾ ವನಿತಾ

ದಿನಾಂಕ 4-2-92 ರಂದು ತುಮಕೂರಿನ ಶ್ರೀ ಕನ್ಯಕಾಪರಮೇಶ್ವರಿ ದೇವಸ್ಥಾನದಲ್ಲಿ ವಾಸವಿ ಆತ್ಮಾರ್ಪಣ ದಿನದ ಅಂಗವಾಗಿ ಏಳು ದಿನಗಳ ಕಾಲ ಸಹಸ್ರ ನಾಮಾರ್ಚನೆ ನಡೆಸಲಾಯಿತು.





ಮಂಡ್ಯದ ರೋಹಿಣಿ ಮಹಿಳಾ ಮಂಡಲಿಯ ಸದಸ್ಯೆಯರು ಕಾವೇರಿ ... ವಿವಾದದಲ್ಲಿ ಗೆಜೆಟ್ ಪ್ರಕಟಣೆ ವಿರೋಧಿಸಿ ಧರಣಿ ಸತ್ಯಾಗ್ರಹ ಕೈಗೊಂಡ...




ಮಂಡ್ಯದ ರೋಹಿಣಿ ಮಹಿಳಾ ಮಂಡಳಿಯು ದಿ. 19-2-92 ರಂದು "ಮಕ್ಕಳ ಪ್ರದರ್ಶನ" ಸ್ಪರ್ಧೆ ನಡೆಸಿತು.



ವಿಜಾಪುರದ ಶಾಖಂಬರಿ ಮಹಿಳಾ ಮಂಡಳದಲ್ಲಿ ದಿ. 27-2-92 ರಂದು ಕರಕುಶಲ ಕಾರ್ಯಕ್ರಮ ನಡೆಸಲಾಯಿತು.



[illegible] ಜಾಗೃತಿ ಮಹಿಳಾ ಮಂಡಳಿಯವರು ಇತ್ತೀಚೆಗೆ ರೋಗಿಗಳಿಗೆ ಹಣ್ಣು ವಿತರಣೆ ([illegible] ಸರಕಾರಿ ಆಸ್ಪತ್ರೆಯಲ್ಲಿ) ಮಾಡಿದರು.



ದಾಂಡೇಲಿಯ ವನಿತಾ ಸಮಾಜ ಆರಂಭಿಸಿದ ಬಾಲವಾಡಿ ಕೇಂದ್ರ ... ತನ್ನ ವಾರ್ಷಿಕೋತ್ಸವವನ್ನು ಸಂಭ್ರಮದಿಂದ ಆಚರಿಸಿತು.



ಸುರತ್ಕಲ್ ಜೂನಿಯರ್ ಚೇಂಬರ್ ಜೇಸಿರೇಟ್ಸ್ ವಿಭಾಗದವರು ಇತ್ತೀಚೆಗೆ ಕುಳಾಯಿ ಮಹಿಳಾ ಮಂಡಳಿಯಲ್ಲಿ ಕುಳಾಯಿ ಪರಿಸರದ ಚಿಕ್ಕ ಮಕ್ಕಳಿಗೆ ಉಚಿತ ವೈದ್ಯಕೀಯ ತಪಾಸಣೆಯನ್ನು ನೆರವೇರಿಸಿಕೊಟ್ಟರು.



ಡಾ॥ ಮೋಹಿನಿ ಎನ್. ಪ್ರಸಾದ್ ನಿರ್ದೇಶಕರಾಗಿರುವ ಮಹಿಳೆಯರ ಆರೋಗ್ಯ ಕೇಂದ್ರ "ವೆಲ್ ವುಮನ್ ಕ್ಲಿನಿಕ್" ಅನ್ನು ಕೇಂದ್ರ ಸಚಿವೆ ಶ್ರೀಮತಿ ಮಾರ್ಗರೆಟ್ ಆಳ್ವ ಇತ್ತೀಚೆಗೆ ಉದ್ಘಾಟಿಸಿದರು.



ಶಿರಹಟ್ಟಿಯ ನಿವೇದಿತಾ ಯುವತಿ ಮಂಡಳವು ದಿ. 3–2–92 ರಂದು ಪುರಂದರದಾಸರ ಪುಣ್ಯದಿನವನ್ನು ಆಚರಿಸಿತು.



ಬೆಂಗಳೂರಿನ ಪದ್ಮಿನಿ 'ಇನ್ನರ್ ವ್ಹೀಲ್' ಕ್ಲಬ್‌ನವರು ಗೌರಿಬಿದನೂರು ತಾಲೂಕಿನ ಮುದಲೋಡು ಗ್ರಾಮದಲ್ಲಿ ವಯಸ್ಕರ ಶಿಕ್ಷಣ ಕೇಂದ್ರ, ಹೊಲಿಗೆ ತರಬೇತಿ ಕೇಂದ್ರ ಮತ್ತು ವಾಚನಾಲಯವನ್ನು ಪ್ರಾರಂಭಿಸಿದರು.

# ಎಂ. ಕೆ. ಇಂದಿರಾ ಕಾದಂಬರಿಗಳ ಬಗೆಗೆ ವಿಚಾರ ಗೋಷ್ಠಿ

'ಕರಾವಳಿ' ಲೇಖಕಿಯರ–ವಾಚಕಿಯರ ಸಂಘ [ದ. ಕ. ಮತ್ತು ಕಾಸರಗೋಡು] ಹಾಗೂ ಕನ್ನಡ ಮಹಿಳಾ ಸಂಘ, ಕಾಸರಗೋಡು, ಇವರ ಜಂಟಿ ಆಶ್ರಯದಲ್ಲಿ ಇತ್ತೀಚೆಗೆ ಕಾಸರಗೋಡಿನ ಕನ್ನಡ ಮಹಿಳಾ ಸಂಘದ ಕಟ್ಟಡದಲ್ಲಿ, 'ಶ್ರೀಮತಿ ಎಂ. ಕೆ. ಇಂದಿರಾ' ಇವರ ಕಾದಂಬರಿಗಳ ಬಗೆಗೆ ವಿಚಾರಗೋಷ್ಠಿಯು ನಿವೃತ್ತ ಉಪಾಧ್ಯಾಯರೂ, ಸಾಹಿತಿಯೂ ಆದ ಶ್ರೀ ಪೆರ್ಲ ಕೃಷ್ಣಭಟ್ ಇವರ ಅಧ್ಯಕ್ಷತೆಯಲ್ಲಿ ಜರುಗಿತು.

"ಕಾದಂಬರಿಗಳನ್ನು ಬರೆಯುವುದು ಎಷ್ಟು ಮುಖ್ಯವೋ, ಅವುಗಳನ್ನು ವಿಮರ್ಶಿಸುವುದೂ ಅಷ್ಟೇ ಮುಖ್ಯ. ಸಮಯ ಕಳೆದಂತೆ ಸಾಹಿತ್ಯದಲ್ಲೂ ಬದಲಾವಣೆಗಳಾಗುತ್ತವೆ. ಯಾವುದೇ ಸಾಹಿತ್ಯ ಸರ್ವಕಾಲಗಳಲ್ಲೂ ದೃಢವಾಗಿ ನಿಲ್ಲುವ ಸತ್ವ, ಶೈಲಿ, ವಿವರಣೆಗಳನ್ನು ಹೊಂದಿರಬೇಕು. ಭಾಷೆ, ಉಚ್ಚಾರ, ವ್ಯಾಕರಣಗಳ ಬಳಕೆಯೂ ಮುಖ್ಯವಾದುದು" ಎಂದು ಕೃಷ್ಣಭಟ್ ನುಡಿದರು. ಶ್ರೀಮತಿ ಎಂ. ಕೆ. ಇಂದಿರಾರವರ ಬರಹ ಕುರಿತಂತೆ ಕೆಲವು ಮಾತುಗಳನ್ನಾಡಿದ ಅವರು, "ಉತ್ತಮ ಸಾಹಿತ್ಯ ರಚನೆಗೆ ಪ್ರತಿಯೊಬ್ಬ ಸಾಹಿತಿಯೂ ಸಿದ್ಧವಾಗಿರಬೇಕು" ಎಂದರು.

ಲೇಖಕಿಯ "ಬ್ರಹ್ಮಚಾರಿ, ಗಿರಿಬಾಲೆ, ವರ್ಣಲೀಲೆ, ಸದಾನಂದ, ತಾಪದಿಂದ ತಂಪಿಗೆ, ಆತ್ಮಸಖಿ" ಮುಂತಾದ ಕಾದಂಬರಿಗಳಲ್ಲಿ ಕಂಡುಬಂದ ವೈವಿಧ್ಯವನ್ನು ಕು॥ ಶ್ರೀಕಲಾ ಉಡುಪ ವಿವರಿಸಿದರು. "ಭಾಷೆ ಹಾಗೂ ಶೈಲಿಯಲ್ಲಿ ಬಿಗಿತನವನ್ನೂ, ತನ್ನದೇ ಆದ ವೈಶಿಷ್ಟ್ಯವನ್ನೂ ಕಾದುಕೊಂಡಿರುವುದು ಗಮನಾರ್ಹ. ಮಲೆನಾಡಿನ ಕುಟುಂಬಗಳನ್ನೇ ಆಧರಿಸಿ ಹೆಣೆದಿರುವ ಕೆಲವು ಕೃತಿಗಳು, ಬಹಳ ಮಟ್ಟಿಗೆ, ಡಾ॥ ಶಿವರಾಮ-ಕಾರಂತರ ಬರಹದ ವೈಖರಿಯನ್ನು ಸ್ಮರಣೆಗೆ ತರುತ್ತವೆ" ಎಂದು ಅವರು ಅಭಿಪ್ರಾಯಪಟ್ಟರು.

'ಫಣಿಯಮ್ಮ, ಗೆಜ್ಜೆಪೂಜೆ' ಕಾದಂಬರಿಗಳನ್ನು ಕೇಂದ್ರವಾಗಿಟ್ಟುಕೊಂಡು ಕು. ಶೈಲಜಾ ಪುದು-ಕೋಳಿ, ಪ್ರಬಂಧ ಮಂಡಿಸಿದರು. "ಬಾಲ್ಯ ವಿವಾಹ, ವಿಧವಾ ಸಮಸ್ಯೆ, ವೇಶ್ಯಾ ಸಮಸ್ಯೆಗಳು ಬಹಳಷ್ಟು ಇದ್ದ ಕಾಲದಲ್ಲಿ ತಮ್ಮ ಸಾಹಿತ್ಯದ ಮೂಲಕ ಸಾಮಾಜಿಕ ಸಂಹಿತೆಯ ಉಲ್ಲಂಘನೆಯಲ್ಲಿ, ಸಾಮಾಜಿಕ ನ್ಯಾಯವನ್ನು ತೋರಿಸಿಕೊಟ್ಟ ಶ್ರೀಮತಿ ಎಂ. ಕೆ. ಇಂದಿರಾರವರು, ಕಾದಂಬರಿ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನ ಪಡೆದಿದ್ದಾರೆ" ಎಂದರು ಶೈಲಜಾ.

ಶ್ರೀಮತಿ ಮಹೇಶ್ವರಿ. ಯು. ಇವರಿಂದ ಪ್ರಾರ್ಥನೆ; ಡಾ॥ ಲಲಿತಾ, ಎಸ್. ಎನ್. ಭಟ್ ಇವರಿಂದ ಸ್ವಾಗತ ಭಾಷಣ ನಡೆಯಿತು. 'ಕರಾವಳಿ' ಸಂಘದ ಅಧ್ಯಕ್ಷೆ, ಶ್ರೀಮತಿ ಸಾರಾ ಅಬೂಬಕ್ಕರ್, ತಮ್ಮ ಸಂಘದ ಸಂಘಟನೆಯ ಬಗ್ಗೆ ಮಾತನಾಡಿದರು. ಶ್ರೀಮತಿ ಆ. ನಾ. ಪೂರ್ಣಿಮಾ ಕಾರ್ಯಕ್ರಮ ನಿರ್ವಹಿಸಿದರು. ಕು॥ ಶ್ರೀಲತಾ ವಂದಿಸಿದರು. **

# ನಿಮ್ಮ ಮಗುವಿನ ಬುದ್ಧಿ ಸಾಮರ್ಥ್ಯ ಹೆಚ್ಚಿಸುವುದು ಹೇಗೆ?



# ಗರ್ಭಸ್ಥ ಶಿಶುವಿಗೆ ಯೋಗಾಭ್ಯಾಸ

ಒಂದು ಹೆಣ್ಣುಮಗಳ ಜೀವನದಲ್ಲಿ, ತಾನು ಚೊಚ್ಚಿಲು ಗರ್ಭಿಣಿ ಎಂದು ತಿಳಿದೊಡನೆ ಅದೆಷ್ಟು ಸಂತಸ; ಸಂಭ್ರಮ ! ಮಗುವಿಗೆ ಜನ್ಮ ಕೊಡುವುದು ಒಂದು ಅದ್ಭುತವಾದ ಪವಾಡ. ನಿಜ, ಇಂದು ಅತ್ಯಾಧುನಿಕ ವೈದ್ಯಕೀಯ ಉಪಕರಣಗಳಿಂದ ಮತ್ತು ತಾಂತ್ರಿಕ ಜ್ಞಾನದಿಂದ ಈ ರಹಸ್ಯವನ್ನು ಭೇದಿಸಲು ಸಾಧ್ಯವಿದೆ. ಆದರೂ ಇದರ ಮರ್ಮ ಇನ್ನೂ ಗುಪ್ತವೇ !

ಇಂದು ಭಾರತದ ಮಹಿಳೆ ತನ್ನ ಕುಟುಂಬ ವನ್ನು ಕಿರಿದಾಗಿಯೇ, ಕಡ್ಡಾಯವಾಗಿ, ಇಡಬೇಕಾ ದುದರಿಂದ, ಗರ್ಭಧಾರಣೆ ಇನ್ನೂ ಹೆಚ್ಚಿನ ಮಹತ್ವವನ್ನು ಪಡೆದಿದೆ. ಈಗ ಬಸಿರು ಆಕಸ್ಮಿಕ ವಾಗಬೇಕಾಗಿಲ್ಲ; ವರ್ಷಕ್ಕೊಮ್ಮೆ ಹೆತ್ತು, ಹೊತ್ತು ಹೆಣಗಾಡಬೇಕಾಗಿಲ್ಲ; ಎಲ್ಲವನ್ನೂ ಅಣಿಮಾಡಿ ಕೊಂಡು ದೃಢಕಾಯದಿಂದಿರುವ ಮಗುವಿನ ಆಗಮನಕ್ಕೆ ಸಿದ್ಧಮಾಡಿಕೊಂಡು, ಗರ್ಭಧರಿಸಲು ಪ್ಲ್ಯಾನ್ ಹಾಕಬಹುದು.

ಗರ್ಭಿಣಿ ಆದೊಡನೆ, ಗರ್ಭಸ್ಥ ಶಿಶುವಿನ ಜೀವನದ ಮಟ್ಟವನ್ನು ಉತ್ತಮಗೊಳಿಸಲು ಇಂದು ಅನೇಕ ವಿಧಾನಗಳಿವೆ. ಮಗುವಿನ ಬೆಳವಣಿಗೆ ಸಹಜಸ್ಥಿತಿಯಲ್ಲಿ ನಡೆಯಬೇಕಾದರೆ, ತಾಯಿಯ ದೇಹಸ್ಥಿತಿ ಎಷ್ಟು ಮುಖ್ಯವೋ, ಮಾನಸಿಕ ಪರಿಸ್ಥಿತಿಯೂ ಅಷ್ಟೇ ಗಹನವಾದದ್ದು.

## ಮಾನಸಿಕ ಒತ್ತಡ

ಈಗಿನ ಒತ್ತಡದ ಯುಗದಲ್ಲಿ, ಗರ್ಭಿಣಿಯೂ ತೀವ್ರವಾಗಿ ಮಾನಸಿಕ ಜಂಜಾಟಕ್ಕೆ ಸಿಲುಕಿಹಾಕಿ-ಕೊಳ್ಳಬಹುದು. ಈ ಅಶಾಂತಿ, ಚಿಂತೆ, ಭ್ರೂಣದ ಬೆಳವಣಿಗೆಯ ಮೇಲೆ ಕೆಟ್ಟ ಪರಿಣಾಮ ಉಂಟು ಮಾಡಿ, ಜನನ ತೂಕ ಕುಂಠಿತವಾಗುವುದು ಖಚಿತ.

ಅನೇಕ ವೇಳೆ ವೈದ್ಯರೂ ಸಹ ಈ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸದೆ, ಆಕೆಯ ಮನಸ್ಸಿನ ಉದ್ವೇಗಕ್ಕೆ ಹೆಚ್ಚು ಬೆಲೆ ಕೊಡದೆ



ಬರೇ ದೈಹಿಕ ಬಾಧೆಗಳಿಗೆ ಚಿಕಿತ್ಸೆ ಮಾಡು ತ್ತಿರುತ್ತಾರೆ. ಇದರಿಂದ ಯಾವುವೇ ಲಾಭವಾಗದು.

## ಗರ್ಭದಲ್ಲಿರುವ ಶಿಶುವಿನ ಬೆಳವಣಿಗೆ ಕುಂಠಿತವಾಗಲು ಕಾರಣವೇನು ?

ತಾಯಿಯ ದೈಹಿಕ ಅನಾರೋಗ್ಯ, ಮಾಸುವಿನ (Placenta) ಅಸಮರ್ಪಕ ಸ್ಥಿತಿ, ಶಿಶುವಿನ ವರ್ಣ ತಂತುಗಳ ಕೊರತೆ ಮುಖ್ಯವಾದ ಕಾರಣ ಗಳು. ಅಂತೆಯೇ ತಾಯಿ ಆಲ್ಕೋಹಾಲ್ ಪಾನೀಯಗಳನ್ನು ಹೆಚ್ಚು ಸೇವಿಸುವುದರಿಂದ,



ಬದ್ಧಕೋಣಾಸನ

ಸಿಗರೇಟು, ಬೀಡಿಗಳನ್ನು ಸೇದುವುದರಿಂದ, ಅನಾವಶ್ಯಕವಾಗಿ ಮದ್ದುಗಳನ್ನು ಸೇವಿಸುವುದರಿಂದ ಭ್ರೂಣದ ಬೆಳವಣಿಗೆ ಸರಿಯಾಗಿ ಆಗದಿರಬಹುದು.

ಮಾನಸಿಕ ಒತ್ತಡವೂ ಮತ್ತೊಂದು ಮುಖ್ಯ ವಾದ ಕಾರಣವೆಂದು ಅನೇಕ ಅಧ್ಯಯನಗಳಿಂದ ಕಂಡುಬಂದಿದೆ. ಭಯ, ಚಿಂತೆ, ಅಶಾಂತಿ, ಉದ್ವೇಗ, ಉದ್ರೇಕ, ಭ್ರೂಣದ ಮೇಲೆ ತೀವ್ರ ಆಘಾತ ಉಂಟುಮಾಡಿ, ಸಹಜವಾಗಿ ಬೆಳೆಯಲು ಅಡ್ಡಿ ಬರುತ್ತದೆ.

ಇಂತಹ ಕ್ಷೀಣ ಶಿಶುಗಳ ಜನನವನ್ನು ತಪ್ಪಿಸು ವುದೇ ನಮ್ಮ ಗುರಿ. ಏಕೆಂದರೆ ಈ ಶಿಶುಗಳು ಪ್ರಸವ ಕಾಲದಲ್ಲಿ ಅನೇಕ ತೊಂದರೆಗಳಿಗೆ ಗುರಿ ಯಾಗುವ ಸಂಭವ ಹೆಚ್ಚು ; ಸುಣ್ಣಾಂಶ, ಸಕ್ಕರೆಯ ಪ್ರಮಾಣ, ಕಡಿಮೆ ಇದ್ದು, ನವಜಾತ ಶಿಶುವು 'ಸೆಳವು' (Convulsion)ಗೆ ತುತ್ತಾಗಬಹುದು ; ರಕ್ತಸ್ರಾವವಾಗಿ ನಿತ್ರಾಣವಾಗಬಹುದು. ಅಕಾಲಿಕ ಜನನದಿಂದ, ಅವಯವಗಳ ಕ್ಷೀಣತೆ, ಶ್ವಾಸ ಕೋಶದ ನಂಜು ಬರಬಹುದು ; ಮುಂದೆ ದೊಡ್ಡವನಾದ ಮೇಲೆ, ತನ್ನ ಜೊತೆಯವರಿಗಿಂತ ದೈಹಿಕವಾಗಿಯೂ, ಮಾನಸಿಕವಾಗಿಯೂ ಹಿಂದು ಳಿಯಬಹುದು.

ಈ ಕಾರಣಗಳಿಂದಾಗಿ, ಕ್ಷೀಣ ಶಿಶು ಜನನವನ್ನು ತಪ್ಪಿಸಲು ಸರ್ವ ಪ್ರಯತ್ನ ನಡೆದಿದೆ. ಆಧುನಿಕ ಚಿಕಿತ್ಸೆಯ ಪ್ರಕಾರ, ಹಾರ್ಮೋನುಗಳು, ಮದ್ದು ಗಳೂ, ಆಮ್ಲಜನಕ, ಶರ್ಕರ ಪಿಷ್ಟಾದಿಗಳು, ಸಸಾರಜನಕಗಳೂ ಸಹಾಯಕಾರಿ ಆಗಿವೆ. ಆದರೂ ಅನೇಕವೇಳೆ ಇದಾವ ವಿಧಾನಗಳಿಗೂ ಹೆಚ್ಚಿನ ಪರಿಣಾಮ ಆಗದೇ ಇರುವುದೂ ಈಗೀಗ ಕಂಡು ಬರುತ್ತಿದೆ. 3 ರಿಂದ 10% ಗರ್ಭಿಣಿಯಲ್ಲಿ ಕ್ಷೀಣ ಶಿಶು ಜನನವಾಗುವುದು ಕಂಡುಬಂದಿದೆ.

## ಕುಂಠಿತ ಶಿಶುಗಳಿಗೆ ಯೋಗಾಭ್ಯಾಸ ದಿಂದ ಒಳಿತಾಗುವುದೇ ?

ಯಾವುದೇ ಒಂದು ಆರೋಗ್ಯ ವಿಧಾನವನ್ನು ಹೊಗಳಬೇಕಾದರೆ, ವೈದ್ಯಕೀಯವಾಗಿ ಪರಿಶೀಲಿಸಿ, ಅಳೆದು, ಹೇಳುವುದು ಇಂದು ಅಗತ್ಯವಾಗಿದೆ. ತಂತ್ರ ವಿಜ್ಞಾನ ಇಂದು ಅದ್ಭುತವಾಗಿ ಮುಂದು ವರಿದಿರುವುದರಿಂದ, ಯೋಗಾಭ್ಯಾಸದ ಪರಿಣಾಮ ವನ್ನೂ, ಶ್ರಮಪಟ್ಟು, ಅಳೆಯಲು ಸಾಧ್ಯವೆಂದು ಒಂದು ಪುಟ್ಟ ಅಧ್ಯಯನವನ್ನು ನಡೆಸಿ ಖಡಾ ಖಂಡಿತ ಮಾಡಿಕೊಳ್ಳಲಾಯಿತು.

ಡಿಸೆಂಬರ್ 1991 ರಲ್ಲಿ ಬೆಂಗಳೂರಿನ ಬಳಿಯಲ್ಲಿರುವ 'ಪ್ರಶಾಂತಿ ಕುಟೀರ' ದಲ್ಲಿ ಜರುಗಿದ **'ಯೋಗ ಸಂಶೋಧನೆ ಮತ್ತು ಪ್ರಯೋಗ'**ದ ಅಂತರ ರಾಷ್ಟ್ರೀಯ ಸಮ್ಮೇಳನದಲ್ಲಿ ಈ ಅಧ್ಯಯನದ ಪ್ರಬಂಧ ವನ್ನು ಮಂಡಿಸಲಾಯಿತು.

ಚತುರ ಪಾದಾಸನ





ಪಾರ್ಶ್ವಹಾಲಾಸನ

## ಈ ಅಧ್ಯಯನದ ಗುರಿ

ಯೋಗಾಭ್ಯಾಸ ಮಾಡುವುದರಿಂದ,

(1) ಗರ್ಭಸ್ಥ ಶಿಶುವಿನ ತೂಕ, ಮತ್ತು ಜನನ ಕಾಲದ ತೂಕಗಳನ್ನು ಉತ್ತಮಗೊಳಿಸಲು ಸಾಧ್ಯವೇ ?

(2) ಅಕಾಲಿಕ ಜನನ ತಪ್ಪಿಸಲು ಸಾಧ್ಯವೇ ?

(3) ಪ್ರಸವದ ನಂತರ, ನವಜಾತ ಶಿಶುವಿನ ತೊಂದರೆಗಳನ್ನು ತಪ್ಪಿಸಲು ಸಾಧ್ಯವೇ ?

(4) ಹೆರಿಗೆ ಸುಲಭವಾಗಿ, ಸರಾಗವಾಗಿ ಆಗಲು ಸಹಕಾರಿಯೇ ?

(5) ಒತ್ತಡದ ಕಾಯಿಲೆಗಳು ದೂರವಾಗಲು ಸಹಕಾರಿಯೇ.

## ಯೋಗಾಭ್ಯಾಸದಿಂದ ಗರ್ಭಸ್ಥ ಶಿಶು ಉತ್ತಮಗೊಳ್ಳುವುದು ಹೇಗೆ ?

ಪ್ರಾಣಾಯಾಮ ಮತ್ತು ಆಸನಗಳ ಅಭ್ಯಾಸ ದಿಂದ, ತಾಯಿ, ಶಿಶು ಇಬ್ಬರಿಗೂ ರಕ್ತಪೂರೈಕೆ ಮತ್ತು ಆಮ್ಲ ಜನಕದ ಪೂರೈಕೆ ಉತ್ತಮವಾಗುತ್ತದೆ. ಗರ್ಭದ ಮಾಸುವು ಪುಷ್ಟಿಗೊಳ್ಳುತ್ತದೆ. ಇಬ್ಬರ ರೋಗ ನಿರೋಧಕ ಶಕ್ತಿಯೂ ಅಭಿವೃದ್ಧಿಗೊಳ್ಳುತ್ತದೆ. ಗರ್ಭಿಣಿಯ ಮಾಂಸಖಂಡಗಳೂ, ನರಗಳೂ ಬಲಿಷ್ಠವಾಗಿ, ಪ್ರಸವ ಸುಲಭವಾಗುತ್ತದೆ. ಕಷ್ಟ ಸಹಿಷ್ಣತೆ ಹೆಚ್ಚುತ್ತದೆ. ಶಾಮಕ ಮಾತ್ರೆಗಳ ಮತ್ತು ನೋವು ನಿವಾರಿಸುವ ಮಾತ್ರೆಗಳ ಆವಶ್ಯಕತೆ ಕಡಿಮೆಯಾಗುತ್ತದೆ.

ಉತ್ಕಟಾಸನ



## ಕ್ಷೀಣ ಶಿಶುವನ್ನು ಗುರುತಿಸುವುದು ಹೇಗೆ ?

ಗರ್ಭದಲ್ಲಿ ಬೆಳೆಯುತ್ತಿರುವ ಕೂಸಿನ ತೂಕ ಕಡಿಮೆಯಾಗುತ್ತಾ ಬಂದರೆ ವೈದ್ಯರು ಕೂಡಲೇ ಕಂಡುಹಿಡಿಯುತ್ತಾರೆ. ಆಗಿಂದಾಗ ತಪಾಸಣೆಗೆ ಬರುತ್ತಿರುವ ಗರ್ಭಿಣಿ ಸ್ತ್ರೀ Scanning ಪರೀಕ್ಷೆಗೆ ಒಳಗಾದಾಗ ಭ್ರೂಣದ ತಲೆಯ ಸುತ್ತಳತೆ, ಹೊಟ್ಟೆಯ ಸುತ್ತಳತೆ ಮುಂತಾದುವು ಸಮರ್ಪಕ ರೀತಿಯಲ್ಲಿ ಇಲ್ಲದಿರುವುದು ತಿಳಿಯುವುದು ಕಷ್ಟವೇನಲ್ಲ. ಗರ್ಭದ ಎತ್ತರ ಕುಂಠಿತವಾಗುತ್ತದೆ. ಗರ್ಭ ಜಲದ ಪ್ರಮಾಣ ಕಡಿಮೆಯಾಗುತ್ತದೆ. ಚಲನ ವಲನದಲ್ಲಿ ವ್ಯತ್ಯಾಸ ಕಂಡುಬರುತ್ತದೆ.



ಚಕ್ರಾಸನ

## ಅಧ್ಯಯನ ನಡೆಸಿದ ರೀತಿ

ಸುಸಜ್ಜಿತ ಅತ್ಯಾಧುನಿಕ 'ಗುಣಶೀಲ ಮೆಟರ್-ನಿಟಿ' ಆಸ್ಪತ್ರೆಯಲ್ಲಿ 50 "ಕ್ಷೀಣ ಭ್ರೂಣ" ತಾಯಿಯರನ್ನು ಪತ್ತೆ ಹಚ್ಚಿ, 25 ಗರ್ಭಿಣಿಯರಿಗೆ



ಉಷ್ಟ್ರಾಸನ (ಒಂಟೆ ಆಸನ)

ಯೋಗಾಭ್ಯಾಸಗಳನ್ನು ಹೇಳಿಕೊಟ್ಟೆವು. ಆಲೋಪತಿಕ್ ಚಿಕಿತ್ಸೆಗೆ ಅಡ್ಡಿ ಬಾರದೆ ಅವುಗಳನ್ನೂ ಮುಂದುವರಿಸಿದೆವು. ಮಿಕ್ಕ 25 ಕಂಟ್ರೋಲ್ ಗ್ರೂಪ್‌ಗೆ, ಬರೀ ಆಲೋಪತಿಕ್ ಚಿಕಿತ್ಸೆ ಕೊಡಲಾಯಿತು.

ನಿಯತ ರೀತಿಯಲ್ಲಿ 8 ರಿಂದ 10 ವಾರಗಳಲ್ಲಿ ಎಂಟು ಯೋಗಾಸನಗಳು, ಪ್ರಾಣಾಯಾಮ, ಓಂ ಧ್ಯಾನ, ಅಶ್ವಿನಿಬಂಧ ಮುಂತಾದುವನ್ನು ಕಲಿತರು. ವಾರದಲ್ಲಿ ಮೂರುದಿವಸ ಯೋಗ ತರಗತಿಗೆ ಬರಬೇಕಾಗಿತ್ತು. ಮಿಕ್ಕ ದಿನಗಳಲ್ಲಿ ಮನೆಯಲ್ಲಿ ಅಭ್ಯಾಸಮಾಡುತ್ತಿದ್ದರು. ತಜ್ಞ ವೈದ್ಯರು ಆಗಿಂದಾಗ್ಗೆ ಇವರನ್ನು ಪರೀಕ್ಷೆ ಮಾಡಿ, Scanning ಮಾಡಿ, ಎರಡೂ ಪಂಗಡಗಳ ಸ್ತ್ರೀಯರನ್ನೂ ಪರಿಶೀಲಿಸುತ್ತಿದ್ದರು.

ಈ ಎಲ್ಲ ಗರ್ಭಿಣಿಯರೂ ಬಹು ಉತ್ಸಾಹ ದಿಂದ ಯೋಗಾಭ್ಯಾಸ ಕಲಿತರು ; ಸ್ವಲ್ಪ ವಾರಗಳಲ್ಲೇ ಅವರ ಭಯ, ಚಿಂತೆ, ಕಳವಳ, ಜಂಜಾಟ ಬಹುಮಟ್ಟಿಗೆ ಕಡಿಮೆಯಾಯಿತು. ಇವರ ಗಂಡಂದಿರೂ ಆಸಕ್ತಿಯಿಂದ ಇವರನ್ನು ಕರೆತರುತ್ತಿದ್ದರು. ಪ್ರಸವಕ್ಕೆ ಈ ಆಸ್ಪತ್ರೆಯಲ್ಲೇ ರಿಜಿಸ್ಟರ್ ಮಾಡಿಸಿದೆವು.

ಪ್ರಸವದ ನಂತರ, ಎಲ್ಲ ರೀತಿಯ ತಪಾಸಣೆಯನ್ನೂ ಹೋಲಿಸಿ ನೋಡಿದಾಗ ಗಮನಾರ್ಹ ಅಂಶಗಳು ಕಂಡುಬಂದವು.

ಯೋಗಾಭ್ಯಾಸ ಮಾಡದ ಗರ್ಭಿಣಿಯರಿಗೆ ಹೋಲಿಸಿದಾಗ ಗಮನಾರ್ಹ ಪರಿಣಾಮ ಕಂಡು ಬಂದಿತು.

ಗರ್ಭಸ್ಥ ಶಿಶುವಿನ ತೂಕ ಮತ್ತು ಬೆಳವಣಿಗೆ ಹೆಚ್ಚಿಗೆ ಇತ್ತು. ಜನನ ತೂಕ ಉತ್ತಮವಾಯ್ತು.

ಅರ್ಧಹಾಲಾಸನ



ಅಕಾಲಿಕ ಜನನ ಸ್ವಲ್ಪಮಟ್ಟಿಗೆ ತಪ್ಪಿಸಲಾಯ್ತು. ಹೆರಿಗೆ ಸಮಯದಲ್ಲಿ ನವಜಾತ ಶಿಶುವಿಗೆ ಯಾವುದೇ ತೊಂದರೆ ಕಾಣಬರಲಿಲ್ಲ; ಅಂತೆಯೇ ಯೋಗಾಭ್ಯಾಸದಿಂದ ರಕ್ತಸ್ರಾವವಾಗಲೀ, ಗರ್ಭ ಇಳಿತವಾಗಲೀ, ಯಾವುದೇ ಕೆಟ್ಟ ಪರಿಣಾಮ ಕಿಂಚಿತ್ತೂ ತೋರಲಿಲ್ಲ.

## ಈ ಅಧ್ಯಯನದಿಂದ ಕಲಿತ ಪಾಠ

ಗರ್ಭಿಣಿ ಸ್ತ್ರೀಯರು ಯೋಗಾಭ್ಯಾಸದಿಂದ ಹೆಚ್ಚಿನ ದೈಹಿಕ ಮತ್ತು ಮಾನಸಿಕ ಶಕ್ತಿ ಪಡೆಯುತ್ತಾರೆ. ಗರ್ಭದ ಶಿಶುವಿನ ತೂಕ ಮತ್ತು ಬೆಳವಣಿಗೆ ಉತ್ತಮವಾಗುತ್ತದೆ.

ಯೋಗಾಭ್ಯಾಸವನ್ನು ಹೇಳಿಕೊಡಲು ತಜ್ಞ ಗುರು ಅವಶ್ಯಕ. ದಿನಗಳು ತುಂಬುತ್ತಿದ್ದಂತೆ, ಆಸನಗಳನ್ನು ಸ್ವಲ್ಪ ಮಾರ್ಪಡಿಸಿ, ಸುಲಭವಾಗಿ ಮಾಡಬಲ್ಲದ್ದನ್ನೇ ಮಾಡಿಸಬೇಕು. ಕೆಲವು ಆಸನಗಳನ್ನು ಮಾಡಬಾರದು. ಒಮ್ಮೆ ಈ ಅಭ್ಯಾಸಗಳನ್ನು ಕಲಿತದ್ದೇ ಆದರೆ, ಜೀವನ ಪೂರ್ತಿ, ಒಳ್ಳೆಯ ಆರೋಗ್ಯ ಹೊಂದಲು ಇದು ನಾಂದಿ.

**ಡಾ|| ಶಮಂತಕಮಣಿ ನರೇಂದ್ರನ್**

ಮಿನಿ ಕಥೆ

# ಮಗ



– ಶ್ರೀಮತಿ. ಎಲ್. ಚಂಪಕಮಾಲಿನಿ

ಆ ಕತ್ತಲೆ ಕೋಣೆಯ, ಮೂಲೆಯಲ್ಲಿ ಕುಳಿತಿದ್ದ ಲಕ್ಷಮ್ಮನವರ ಕಣ್ಣಿನಿಂದ ನೀರು ಒಂದೇ ಸಮನೆ ಸುರಿಯುತ್ತಿತ್ತು... 'ತಾವು ಯಾರಿಗೆ, ಏನು ಅನ್ಯಾಯ ಮಾಡಿದೆನೆಂದು ಈ ಶಿಕ್ಷೆ, ದೇವರೇ ?!' ಎಂದು ತಮಗೆ ತಾವೇ ಕೇಳಿ ಕೊಳ್ಳುತ್ತಿದ್ದರು...

ಹಳ್ಳಿಯಲ್ಲಿ ಮೇಷ್ಟರಾಗಿದ್ದ ತಮ್ಮ ಪತಿಯ ಜೊತೆ ತಾವು ತುಂಬಾ ಸುಖವಾಗಿದ್ದರು ; ಇದ್ದ ಒಬ್ಬನೇ ಮಗನಿಗೆ ಎಷ್ಟೋ ಕಷ್ಟಪಟ್ಟು, ಚೆನ್ನಾಗಿ ಓದಿಸಿದ್ದರು, ಅಂತೇ, ಇಂದು ಅವನೂ ಒಳ್ಳೆಯ ಕೆಲಸದಲ್ಲಿದ್ದನು. ಎಷ್ಟೋ ಆಸೆಗಳ-ನ್ನಿಟ್ಟುಕೊಂಡು, ಅವನಿಗೆ ಮದುವೆಯೂ ಮಾಡಿದರು, ಆದರೆ ಬಂದ ಆ ಸೊಸೆ, ಮನೆಯ ಲಕ್ಷ್ಮಿಯಾಗಿ ಬರಲಿಲ್ಲ, ಹೆಮ್ಮಾರಿಯಾಗಿ ಬಂದವಳು ಗಂಡನ ಮನಸ್ಸನ್ನು ತಮ್ಮಗಳ ಬಗ್ಗೆ ಕೆಡಿಸಿ ಬಿಟ್ಟಳು "ಈ ಮುದಿಗೊಡ್ಡಿಗೆ ಇನ್ನೂ ಎಷ್ಟು ದಿನ ಸೇವೆ ಮಾಡಬೇಕು ?! ಒಳ್ಳೇ ಪ್ರಾರಬ್ಧ" ಎಂಬ ಮೂದಲಿಕೆ ! ತಮಗಿರುವುದು ಒಬ್ಬನೇ ಮಗ ; ಇನ್ನೆಲ್ಲಿಗೆ ತಾನೇ ತಾನು ಹೋಗಬಹುದು.

ಆ ದಿನ... ಮಗನ ಆಫೀಸಿಗೆ ಹೊಸ ಸಾಹೇಬರು ವರ್ಗವಾಗಿ ಬಂದಿದ್ದರಂತೆ. ಅತಿ ದಕ್ಷ ರೆಂದೂ, ನ್ಯಾಯವಾದಿಗಳೆಂದೂ ಹೆಸರು ಪಡೆದವ ರಂತೆ ಹೊಸದಾಗಿ ಬಂದಿದ್ದ ಅವರನ್ನು ತಮ್ಮ ಮನೆಗೂ ಊಟಕ್ಕೆ ಕರೆದಿದ್ದ ಮಗ...ಹೆಂಡತಿಗೆ, ಏನೇನು ಏರ್ಪಾಡುಗಳಾಗಬೇಕೆಂದು ಹೇಳುತ್ತಿದ್ದ. "ನಿಮ್ಮಮ್ಮಂಗೆ ಹೇಳ್ರಿ...ಸದ್ಯ, ಅವರೆಲ್ಲಾ ಬಂದಾಗ ಮಧ್ಯೆ ಇವರೂ ಬಂದು ಅವಾಂತರ ಮಾಡಿ ಯಾರು" ಎಂದಳು ಸೊಸೆ. ಮಗ "ಅಮ್ಮಾ ನಾಳೆ ನಮ್ಮ ಸಾಹೇಬ್ರು ಇಲ್ಲಿಗೆ ಊಟಕ್ಕೆ ಬರ್‍ತಾರೆ... ಆಗ ನೀನು ಅವರ ಮುಂದೆಲ್ಲಾ ಬರ್ಬೇಡ... ತೆಪ್ಪಗೆ ಇಲ್ಲೇ ಬಿದ್ದಿರು..." ಎಂದು ಹೇಳಿ ಹೋದ.

ಮಾರನೆಯ ದಿನ, ಆಫೀಸರು, ಅವರ ಹೆಂಡತಿ ಕಾರಿನಲ್ಲಿ ಬಂದಿಳಿದರು ; ರೂಮಿನಲ್ಲೇ ಕೂತಿದ್ದ ಲಕ್ಷಮ್ಮನವರಿಗೂ ಅವರ ನಗು, ಮಾತು-ಕತೆ ಎಲ್ಲಾ ಕೇಳಿಸುತ್ತಿತ್ತು. ಹಾಗೆಯೇ ಅವರಿಗೆ ಎಲ್ಲೋ ಕಣ್ಣೆಳೆದುಕೊಂಡು ಹೋಗುತ್ತೇನೋ, ತಟ್ಟನೆ ಎಚ್ಚರವಾದಾಗ, "ಮನೆ ತುಂಬಾ ಚೆನ್ನಾಗಿ ಕಟ್ಟಿಸಿದೀರಿ, ಮಿ. ರಾವ್...ಓಹೊ. ಇದೊಂದು ರೂಮೋ ?" ಎನ್ನುತ್ತಾ, ನೇರ ತನ್ನ ರೂಮಿನ ಒಳಗೇ ಬಂದ ಸಾಹೇಬರು ಕಂಡರು. ತಾವು, ಏನೋ ಮಾಡಬಾರದ ತಪ್ಪು ಮಾಡಿದಂತೆ ಹೆದರಿ, ಥಿಗ್ಗನೆ ಲಕ್ಷಮ್ಮನವರು ಎದ್ದುನಿಂತರು : ಎದುರಿಗೇ ಸಾಹೇಬರು ! ಒಂದು ಕ್ಷಣ ಅವರ ಮುಖ ದೃಷ್ಟಿಸಿ ನೋಡಿದರು. ಅವರಿಗೆ ತಾವೆಲ್ಲಿದ್ದೇ ನೆಂಬ ಪರಿವೆಯೇ ಹೋಗಿ, ತಟ್ಟನೆ ಇಪ್ಪತ್ತು ವರ್ಷದ ಹಿಂದೆ ಹೊರಟುಹೋಗಿದ್ದರು ! "ಏಯ್ ನೀನು ರಂಗ ಅಲ್ವೇನೋ ?" ಎಂದು ಅವರ ಬಾಯಿಂದ ಉದ್ಗಾರ ಹೊರಟಿತು. ಆಶ್ಚರ್ಯಗೊಂಡ ಸಾಹೇಬರೂ, ಅವರನ್ನು ದೃಷ್ಟಿಸಿ ನೋಡಿ, ತಟ್ಟನೆ ಅವರ ಕಾಲಿಗೆ ಬಿದ್ದು, "ಅಯ್ಯೋ. ದೊಡ್ಡಮ್ಮಾ. ನೀವಾ ?! ಸಾಕ್ಷಾತ್ ಮಹಾಲಕ್ಷ್ಮಿಯಂತಿದ್ದವರು. ಈಗ್ಯಾಕೆ ಹೀಗಾಗಿ ದ್ದೀರಿ" ಎನ್ನುತ್ತಾ, ಮೇಲೆದ್ದು ಲಕ್ಷಮ್ಮ ನವರನ್ನು ಮೆಲ್ಲನೆ ಕುರ್ಚಿಯ ಮೇಲೆ ಕೂಡಿಸಿ, ತಾವು ಕೆಳಗೆ ನೆಲದ ಮೇಲೆ ಕೂತು, "ಲಕ್ಷ್ಮೀ. ಇಲ್ಲಿ ಬಾ..." ಎಂದು ತಮ್ಮ ಹೆಂಡತಿಯನ್ನು ಕರೆದು "ನಾನು ನಿನಗೆ ಯಾವಾಗ್ಲೂ ಹೇಳ್ತಿರ್‍ಲಿಲ್ಲಾ, ಇಂದು ನನ್ನ ಈ ಐ ಎ ಎಸ್ ಹುದ್ದೆ ಸಿಕ್ಕಿದ್ದು, ನನ್ನಮ್ಮನ ದಯದಿಂದಲೇ ಎಂದು... ಆ ಅಮ್ಮನೇ ಇವರು...ನನ್ನ ಭಾಗದ ಸಾಕ್ಷಾತ್ ದೇವತೆ !

"ಲಕ್ಷ್ಮಿ, ನನಗೆ ತಾಯಿ ಸತ್ತಾಗ ಮೂರು ವರ್ಷವಂತೆ, ನನಗಂತೂ ಅವಳ ನೆನಪೇ ಇಲ್ಲ ; ಆದರೆ ನನಗೆ ತಾಯಿಗಿಂತಲೂ ಹೆಚ್ಚು ಮಮತೆ ತೋರಿ, ತಮ್ಮ ವಾತ್ಸಲ್ಯದಲ್ಲಿ ನನ್ನನ್ನು ಮುಳುಗಿಸಿದ್ದ ಈ ದೊಡ್ಡಮ್ಮನೇ ನನ್ನ ಪ್ರತ್ಯಕ್ಷ ದೈವ. ಇವರ ಮನೆಯಲ್ಲಿ ಆಳಾಗಿದ್ದ ನನ್ನ ಅಪ್ಪ, ನನ್ನನ್ನು ತಮ್ಮ ಮನೆಯಲ್ಲೇ ಇಟ್ಟುಕೊಂಡು, ಊಟ-ಬಟ್ಟೆ, ಪ್ರೀತಿ, ವಾತ್ಸಲ್ಯವನ್ನು ಕೊಟ್ಟು ಸಾಕಿದ ಮಹಾತಾಯಿ ಇವರು. ಸ್ಕೂಲಿಗೆ ಸೇರಿ ಸಿದ್ದೂ ಇವರೇ, ಅಲ್ಲದೆ ಮನೆಯಲ್ಲೂ ದಿನವೂ ಪಾಠ ಹೇಳಿ ಕೊಡುತ್ತಿದ್ದರು. ಮುಂದೆ, ತಮಗೇ ಒಬ್ಬ ಮಗ ಹುಟ್ಟಿದರೂ, ನನ್ನನ್ನಂತೂ, ತಮ್ಮ ಸ್ವಂತ ದೊಡ್ಡ ಮಗನಂತೇ, ಅದೇ ಪ್ರೀತಿಯಿಂದ ಬೆಳೆಸಿದರು...

"ಅಂದು, ಆ ದಿನವನ್ನೂ ನಾನು ಮರೆಯಲಾರೆ. ಅಂದೇ ಎಸ್. ಎಸ್. ಎಲ್. ಸಿ ಪರೀಕ್ಷೆಗೆ ದುಡ್ಡು ಕಟ್ಟಲು ಕೊನೆಯ ದಿನ. ಅಪ್ಪನೂ ದುಡ್ಡಿಗಾಗಿ ಎಲ್ಲೆಲ್ಲೋ ಪರದಾಡಿದ, ಸಿಗಲಿಲ್ಲ. ನನಗಂತೂ ಆಕಾಶವೇ ಕಳಚಿ ಬಿದ್ದಂತಾಗಿತ್ತು, ಮಂಕಾಗಿ ಮನೆಯಲ್ಲಿ ಕೂತಿದ್ದೆ. ಆಗ ಅಲ್ಲಿಗೆ ಬಂದರು ಈ ಮಹಾತಾಯಿ. "ರಂಗಾ, ದುಡ್ಡು ಕಟ್ಟಿ ಬಂದ್ಯಾ-ಇವತ್ತೇ ಕೊನೇದಿನ ಅಲ್ವೇನೋ ?" ಎಂದು ಕೇಳಿದರು. "ದುಡ್ಡು ಸಿಗಲಿಲ್ಲ" ಎಂದು ಬಿಕ್ಕಳಿಸಿದೆ. "ಅಯ್ಯೋ, ಹುಚ್ಚಾ...ನಾನಿರಲಿಲ್ವೇನೋ, ನಿನ್ನಮ್ಮಾ...ನನ್ನ ಕೇಳ್ಬಾರ್ದಾಗಿತ್ತೆ ?... ಹಾಂ... ಹೀಗೇ ಏನೋ ಆಗಿರತ್ತೆ ಅಂತ ಗೊತ್ತಿತ್ತು ನಂಗೆ- ತೋಗೋ ದುಡ್ಡು ತಂದಿದೀನಿ...ಈಗ್ಲೇ ತೊಗೊಂಡು ಹೋಗಿ, ಕಟ್ಟಿ ಬಾ... ಪರೀಕ್ಷೆಯಲ್ಲಿ ಚೆನ್ನಾಗಿ ಓದಿ, ರ್‍ಯಾಂಕ್ ತೊಗೊಂಡು ನಮ್ಮ ಹಳ್ಳಿಗೇ ಒಳ್ಳೆ ಹೆಸರು ತರ್ಬೇಕು ನೋಡು. ಅಂದೇ ನನಗೆ ಸಮಾಧಾನ" ಅಂದ್ರು.

"ಕಷ್ಟಪಟ್ಟು ಓದಿದೆ. ರ್‍ಯಾಂಕೂ ಬಂತು, ಮುಂದೆ ಫ್ರೀಶಿಪ್ಪು, ಸ್ಕಾಲರ್‌ಶಿಪ್ಪು ಸಿಕ್ಕಿ ಬೆಂಗಳೂರಿಗೆ ಬಂದು ಓದ ತೊಡಗಿದೆ. ಪ್ರತಿಸಲ ಪಾಸಾದಾಗ್ಲೂ, ನನ್ನ ದೊಡ್ಡಮ್ಮನಿಗೆ ಹೇಳಲು ಉತ್ಸಾಹದಿಂದ ಹಳ್ಳಿಗೆ ಓಡುತ್ತಿದ್ದೆ. ಆ ತಾಯಿಗಂತೂ ಅದೇನು ಸಂತೋಷವೋ ! ಬಾಯಿ ತುಂಬಾ ಸೀತಿಂಡಿ ತುಂಬಿ, ಆಶೀರ್ವಾದ ಮಾಡುತ್ತಿದ್ದರು. ಪುನಃ ನಾನು ಹಳ್ಳಿಗೆ ಹೋದದ್ದು, ಐ ಎ ಎಸ್ ನಲ್ಲಿ ಪಾಸಾದ ವಿಷಯ ಅಮ್ಮನಿಗೆ ತಿಳಿಸಲು ! ಆದರೆ, ಅಷ್ಟರಲ್ಲಿ ಮೇಷ್ಟ್ರು ತೀರಿ ಹೋಗಿ, ಅಮ್ಮ ಮಗನ ಜೊತೆ ಬೆಂಗಳೂರಿಗೆ ಹೊರಟು ಹೋದ ವಿಷಯ ತಿಳಿಯಿತು. ಅಂದಿನಿಂದ ನಾನು ಈ ಅಮ್ಮನಿಗಾಗಿ ಹುಡುಕುತ್ತಲೇ ಇದ್ದೆ. ಎಂದಾದರೊಂದು ದಿನ ಅವಳನ್ನು ಕಂಡೇ ಕಾಣುತ್ತೇನೆಂದು ನನ್ನ ಅಂತರಾತ್ಮ ಹೇಳುತ್ತಲೇ ಇತ್ತು. ಇಂದು ಈ ದಿನ ನನ್ನ ನಿಧಿ ನನಗೆ ಸಿಕ್ಕಿತು ಎಂದರು. ಲಕ್ಷಮ್ಮನವರಂತೂ ಮಾತನಾಡುವ ಸ್ಥಿತಿಯಲ್ಲೇ ಇರಲಿಲ್ಲ !

"ಅಮ್ಮಾ, ಈ ನಿಮ್ಮ ದೊಡ್ಡ ಮಗನ ಮನೆಯಲ್ಲೂ ನೀವು ಕೆಲವು ದಿನ ಇರಲೇಬೇಕು, ನಿಮ್ಮ ಮಾತೃಋಣವನ್ನು ಕಿಂಚಿತ್ತಾದರೂ ತೀರಿಸಬೇಡವೇ !" ಎಂದು ಆ 'ಸಾಕು ಮಗ' ಅಮ್ಮನ ಕೈ ಹಿಡಿದು ಕಾರಿನ ಬಳಿ ಕರೆದೊಯ್ಯುತ್ತಿದ್ದಾಗ, ಅವಮಾನದಿಂದ ತಲೆ ತಗ್ಗಿಸಿ ನಿಂತಿದ್ದ ಈ 'ಸ್ವಂತ ಮಗ' !!!

*****




# "ಜನನೀ ಜನ್ಮಭೂಮಿಶ್ಚ...."

ರವಿ, ಸುಮ ಅಮೆರಿಕ ಬಿಟ್ಟು ವಾಪಸ್ಸು ಭಾರತಕ್ಕೆ ಬರ್ತಾರೆ ಎಂದಾಗ ಎಲ್ಲರೂ ಮೂಗಿನ ಮೇಲೆ ಬೆರಳಿಟ್ಟು ಹುಬ್ಬೇರಿಸಿದವರೇ. ಖಾಸಗಿ ಕಂಪನಿಯಲ್ಲಿ ಕೆಲಸದಲ್ಲಿದ್ದ ರವಿಗೆ ಅಮೆರಿಕಕ್ಕೆ ಹೋಗೋ ಅವಕಾಶ ಸಿಕ್ಕಾಗ ಇಬ್ಬರೂ ಬಹಳ ಸಂಭ್ರಮ ಪಟ್ಟಿದ್ದರು. ಎಷ್ಟು ಜನಕ್ಕೆ ಸಿಗತ್ತೆ ಇಂಥ ಅದೃಷ್ಟ ಎಂದು ಹಿಗ್ಗಿ ಒಂದು ವರ್ಷದ ಗಂಡು ಮಗುವಿನೊಡನೆ ಅಮೆರಿಕಕ್ಕೆ ಹೋಗಿ ಹತ್ತು ವರ್ಷ ಕಳೆದಿತ್ತು. ಸಾಕಷ್ಟು ದುಡ್ಡೂ ಕೂಡಿಟ್ಟು, ಬಂಧು ಬಾಂಧವರಿಗೂ ಆರ್ಥಿಕ ಸಹಾಯ ನೀಡಿದರು. ಎರಡು ವರ್ಷಕ್ಕೊಮ್ಮೆ ಇವರು ಸ್ವದೇಶಕ್ಕೆ ಭೇಟಿ ಇತ್ತಾಗ ಇವರು ತರುತ್ತಿದ್ದ ಗಿಫ್ಟ್ ಮೇಲೆ ಎಲ್ಲರ ಕಣ್ಣು. ಆದರೆ ಅಲ್ಲಿ ಐದಾರು ವರ್ಷ ಕಳೆದಂತೆ,

"ಅಲ್ಲಾ ಸುಮ...ಇಲ್ಲಿ ಎಷ್ಟು ದಿನ ಇದ್ರೂ ನಮ್ದೂಂತ ಅನ್ನೋದೇ ಇಲ್ವಲ್ಲ. ಯಾರ್ದೋ ಮನೆಗೆ ಬಂದು ಇದ್ದಾಗೆ ಆಗತ್ತೆ" ಎಂದು ಮಾತು ತೆಗೆದಿದ್ದ ರವಿ.

"ನೀವು ಹೇಳೋದು ನಿಜ ರವಿ...ನನಗೂ ಹಾಗೇ ಆಗತ್ತೆ. ಬೇಕಾದಷ್ಟು ದುಡ್ಡಿದೆ. ಬೇಕಾದ್ದು ತೊಗೋತೀವಿ. ಆದ್ರೂ ಮತ್ತೊಬ್ಬರ ಮನೇಲಿ ಕೂತು ಮೃಷ್ಟಾನ್ನ ತಿಂದ ಹಾಗೆ ಆಗತ್ತೆ. ನಮ್ಮನೇಲಿ ಕೂತು ಗಂಜಿ ಕುಡಿದ ಸುಖ ಇಲ್ಲ. ಇಲ್ಲಿ ಸಂಸ್ಕೃತಿಯಂತೂ ನಮಗೆ ಒಗ್ಗಲ್ಲ. ಮಕ್ಕಳು ಇಲ್ಲಿನ ಬೆಳೀಬೇಕಲ್ಲ" ಎಂದು ದನಿಗೂಡಿಸಿದ್ದಳು.

ಇಲ್ಲೂ ಅವರಿದ್ದ ಜಾಗದಲ್ಲಿ ಭಾರತೀಯ ಸಂಘ ಸಂಸ್ಥೆಗಳು ಇಲ್ಲದಿಲ್ಲ. ಬೇರೆ ಬೇರೆ ಭಾಗದ ಭಾರತೀಯರು ಇದ್ದಾರಾದರೂ ಮಾತಾಡೋದು ಇಂಗ್ಲೀಷಿನಲ್ಲೀ ಹಿಂದಿನೂ ಅಪರೂಪ. ಮಾತೃ ಭಾಷೆ ಅಂತೂ ಇಲ್ಲ. ಆಗೊಮ್ಮೆ ಈಗೊಮ್ಮೆ ಭಾರತೀಯ ಅಡಿಗೆ ತಿಂದು ಸೀರೆ ಉಟ್ಕೊಂಡು ಬಿಟ್ರೆ ಭಾರತೀಯತೆ ಉಳಿದುಬಿಡುತ್ತಾ ಅಂತ ಸುಮಳ ಅನಿಸಿಕೆ. ಇಲ್ಲಿಗೆ ಬಂದ ಮೇಲೆ ಒಂದು ಹೆಣ್ಣು ಮಗೂನೂ ಆಗಿತ್ತು. ಇವರ ಮನಸ್ಸು ಬಹಳ ಆತಂಕಕ್ಕೆ ಒಳಗಾಗಿದ್ದು ಅಲ್ಲೇ ಹುಟ್ಟಿ ಬೆಳೆದ ಭಾರತೀಯ ಮಕ್ಕಳನ್ನು ನೋಡಿ. ಇನ್ನೂ ಪರೆಯದ ಮಕ್ಕಳು ತಂದೆ ತಾಯಿಯರೆದುರಿಗೇ ವ್ಯವಹರಿಸೋ ರೀತಿ, ಮಾತಾಡೋ ರೀತಿ ನೋಡಿ ಎಲ್ಲಿಗೆ ಹೋಗಿ ಮುಟ್ತಾರೆ ಈ ಮಕ್ಕಳು ಎಂದು ಮನಸ್ಸು ಮುದುಡುತಿತ್ತು. ಆ ಮಕ್ಕಳ ರೀತಿ, ಅವರ ತಂದೆ ತಾಯಿಯರ ಪಾಡು ಯಾಕೋ ಇವರಿಗೆ ಹಿತವೆನಿಸುತ್ತಿರಲಿಲ್ಲ. ತಮ್ಮ ಮಕ್ಕಳು ದೊಡ್ಡೋರಾಗೋ ಮುಂಚೆನೇ ಭಾರತಕ್ಕೆ ಹೊರಟ್ಹೋಗ್ಬೇಕೂಂತ ನಿರ್ಧಾರ ಮಾಡಿದರು. ಆರ್ಥಿಕ ಪರಿಸ್ಥಿತಿ ಬಗ್ಗೆ ಮಾತು ಬಂದಾಗ,

"ನನ್ನ ಅನುಭವಕ್ಕೆ ತಕ್ಕ ಹಾಗೆ ನನ್ನ ಕ್ಷೇತ್ರದಲ್ಲೇ ಏನಾದ್ರೂ ಮಾಡಬಹುದು. ಅದೆಲ್ಲಾ ಪ್ರಾಜೆಕ್ಟ್ ತಯಾರು ಮಾಡಕ್ಕೆ ಒಂದೆರಡು ವರ್ಷ ಬೇಕು. ನನಗೂ ಅಲ್ಲಿ ಸಾಕಷ್ಟು ಪರಿಚಯದವರಿದ್ದಾರೆ. ಸದ್ಯಕ್ಕೆ ಎಲ್ಲಾದ್ರೂ ಕೆಲ್ಸ ಸಿಗೋದು ಕಷ್ಟ ಆಗ್ಲಾರ್ದು. ಜೊತೆಗೆ ನಾವು ಕೂಡಿಟ್ಟಿರೋ ದುಡ್ಡನ್ನು ಸರಿಯಾಗಿ ಯೋಜಿಸಿ ಊರ್ಜಿತಗೊಳಿಸಿದರೆ ಏನೂ ತೊಂದರೆ ಆಗ್ಲಾರ್ದು." ಇದು ರವಿಯ ಆತ್ಮವಿಶ್ವಾಸದ ಮಾತು. ಹಾಗೆ ನೋಡಿದರೆ ಆರ್ಥಿಕ ಚಿಂತೆ ಇವರ್ಗಿಂತ ಬೇರೆಯವರಿಗೆ ಜಾಸ್ತಿ ಆಯ್ತು. ಮಗಳ ಮದುವೆ, ಹೆಂಡತಿ ಆಪರೇಷನ್, ಮನೆ ನಿರ್ಮಾಣ ಎಂಬುದಕ್ಕೆಲ್ಲಾ ಇವರ ಡಾಲರ್ಸ್ ರುಚಿ ಹತ್ತಿದವರು ಇನ್ನೂ ಅದನ್ನೇ ನಂಬಿ ಬೇಕಾದಷ್ಟು ಯೋಜನೆ ಹಾಕಿದ್ದರು. ಅದಕ್ಕೆ ಇವರು ಭಾರತಕ್ಕೆ ಬರ್ತಾರೆ ಅಂದಾಗ "ಏನು ಗುಗ್ಗು ಅವರು" "ತಲೆ ಇದೆಯಾ" ಎಂದೆಲ್ಲಾ ಮೂದಲಿಸಿದರು.

"ಅಲ್ಲಿ ಹೋಗಿ ಬದುಕೋಕೂ ತಾಕತ್ತು ಬೇಕು. ಇವರ ಕೈಲಿ ಎಲ್ಲಾಗತ್ತೆ" ಎಂದೂ ಛೇಡಿಸಿದರು. ಆದರೆ ಹಿರಿಯರು ಮಾತ್ರ "ಮನಸ್ಸಿಗೆ ನೆಮ್ಮದಿ ಸಂತೋಷ ಮುಖ್ಯ. ನಿಮಗೆ ಹಿತ ಇಲ್ದಿದ್ರೆ ಬಂದು ಬಿಡಿ" ಎಂದಿದ್ದರು. ಅಷ್ಟೇ ಸಾಕಾಗಿತ್ತು ಇವರಿಗೆ ಗಂಟು ಮೂಟೆ ಕಟ್ಟಿ ಹೊರಡಲು. ಅಲ್ಲಿ ಮಕ್ಕಳು ಎಷ್ಟೇ ಹೇಳ್ಕೊಟ್ರೂ 'ಅಪ್ಪ' 'ಅಮ್ಮ' ಅಂತ ಕರೀತಾ ಇರಲಿಲ್ಲ. ಇಲ್ಲಿಗೆ ಬಂದು ಕೆಲವೇ ತಿಂಗಳಲ್ಲಿ 'ಅಪ್ಪ' 'ಅಮ್ಮ' ಎಂದು ಕೂಗುತ್ತಾ ಬಂದು ಕಟ್ಟಿಕೊಂಡಾಗ ಇಬ್ಬರಿಗೂ ಮನಸ್ಸಿಗೆ ತೃಪ್ತಿ ಆಗಿ ತಾವು ಮಾಡಿದ್ದು ತಪ್ಪಾಗಲಿಲ್ಲ ಎಂದು ಖಚಿತವಾಯ್ತು.

— ಸುಶೀಲ ಸೂರ್ಯನಾರಾಯಣ



ಮಿನಿಕಥೆ:

# ಕಳುವಾದ ಕೈಗಡಿಯಾರ



"ನನ್ನ ವಾಚು ನೋಡಿದ್ಯೇನೇ ?" ಎಂದು ಇವರು ಕೇಳಿದರು.

"ಅಲ್ಲೇ ಟೇಬಲ್ ಮೇಲೆ ಇರ್ಬೇಕು ನೋಡೀಪ್ಪಾ, ಕೈ ಬಿಡುವಿಲ್ಲ" ಎಂದೆ ಉಪ್ಪಿಟ್ಟು ತಯಾರಿಸುವುದರಲ್ಲಿ ಮಗ್ನಳಾಗಿದ್ದ ನಾನು.

ಮಕ್ಕಳನ್ನು ಶಾಲೆಗೆ ಕಳಿಸಿ, ಮನೆ ಕೆಲಸ ಮುಗಿಸಿ, ಆಫೀಸಿಗೆ ಸಮಯಕ್ಕೆ ಸರಿಯಾಗಿ ಹಾಜರಿರಬೇಕು. ಅದೇ ಗಮನದಲ್ಲಿ ಉಸಿರು ಬಿಗಿಹಿಡಿದು ಕೆಲಸ ಪೂರೈಸುತ್ತಿದ್ದ ನನಗೆ ಇವರ ಕೈಗಡಿಯಾರದ ಕಡೆ. ಗಮನ ಕೊಡಲು ವೇಳೆಯೆಲ್ಲಿ ?

"ಎಲ್ಲಾ ಕಡೆ ಹುಡುಕ್ಬಿಟ್ಟೇ ನಿನ್ನನ್ನು ಕೇಳ್ತಿರೋದು" ಎಂದರು ಇವರು ಸ್ವಲ್ಪ ಅಸಹನೆಯಿಂದಲೇ.

"ರೀ, ಕೆಲಸದವಳು ಕದ್ದಿಟ್ಟಿದ್ದಾಳೇರಿ" ಎಂದೆ ಏನೋ ತಕ್ಷಣ ಹೊಳೆದಂತಾಗಿ.

"ಅದ್ಹೇಗೆ ಹೇಳ್ತೀಯಾ ?"

"ಅವಳು ಹೊರಡೋವಾಗ ನಮ್ಮ ರೂಮಿಗೆ ಹೋಗಿದ್ದು ನೋಡಿದೆ. ಏನೇ ಅದು ಅಂತ ಇಲ್ಲಿಂದ್ಲೇ ಕೂಗಿದ್ದಕ್ಕೆ 'ಅನ್ನದ ಪಾತ್ರೆ ಮೇಲೆ ಮುಚ್ಚಕ್ಕೆ ಕಾಗದ ತಗೊಂಡೆ' ಅಂತ ಹೇಳಿದ್ಳು. ಆ ನೆಪದಲ್ಲಿ ವಾಚು ತೊಗೊಂಡು ಬಿಟ್ಟಿದ್ದಾಳೆ" ಎಂದೆ ಒಂದು ತೀರ್ಮಾನಕ್ಕೆ ಬಂದು. ಏಕೋ ಇವರಿಗೆ ರಾಧಳ ಮೇಲೆ ಅನುಮಾನ ಬರಲಿಲ್ಲ.

ಇಬ್ಬರೂ ಮತ್ತೆ ಮನೆಯೆಲ್ಲಾ ಜಾಲಾಡಿದೆವು. ಉಹುಂ, ವಾಚು ಸಿಗಲಿಲ್ಲ. ಇನ್ನೆಲ್ಲಿ ಹೋಗಲು ಸಾಧ್ಯ? ಅವಳೇ ಕದ್ದಿದ್ದಾಳೆಂದು ನಿರ್ಧರಿಸಿದೆವು. ನನಗಂತೂ ಮನಸ್ಸಿಗೆ ತುಂಬಾ ಬೇಸರವಾಗಿತ್ತು. ಅದು ಇವರಿಗೆ ನನ್ನ ತವರು ಮನೆಯವರು ಮೊದಲ ದೀಪಾವಳಿಗೆ ಕೊಟ್ಟ ಉಡುಗೊರೆ. ಛೆ, ಎಂತಹ ಕೆಲಸವಾಯಿತು. ಅವಳಿಂದ ಹೇಗಾದರೂ ವಾಚು ಕಕ್ಕಿಸಬೇಕು ಎಂದುಕೊಂಡೆ.

ಈ ಮಧ್ಯೆ ಮಕ್ಕಳನ್ನು ಆತುರಾತುರವಾಗಿ ಶಾಲೆಗೆ ಕಳಿಸಿದ್ದಾಯಿತು. ನಾವಿಬ್ಬರೂ ಆಫೀಸಿಗೆ ಹೋಗುವ ಯೋಚನೆ ಬಿಟ್ಟೆವು.

ಇಬ್ಬರೂ ಬಿರಬಿರನೆ ರಾಧಳ ಮನೆಗೆ ಹೋದೆವು. ನನ್ನ ಧ್ವನಿ ಕೇಳಿ ರಾಧ ಹೊರ ಬಂದಳು. ನಾನು ಯಾವುದೇ ಪೀಠಿಕೆಯಿಲ್ಲದೆ, "ರಾಧ, ನನ್ನ ಗಂಡನ ವಾಚನ್ನು ಒಳ್ಳೆ ಮಾತಲ್ಲಿ ವಾಪಸು ಕೊಡು" ಎಂದೆ.

"ಏನಮ್ಮ, ಇಂಗೆ ಯೇಳ್ತೀರಾ ? ನಂಗೆ ಯಾವ ವಾಚೂ ಗೊತ್ತಿಲ್ಲ" ಎಂದಳು ರಾಧ. ಗಲಿಬಿಲಿಗೊಂಡು ಗಾಬರಿಯಿಂದ ಅವಳ ಮುಖ ಬಿಳುಚಿಕೊಂಡಿತು.

"ನೀನು ಹೀಗೆಲ್ಲಾ ನಟಿಸಿದ್ರೆ ನಂಬ್ತೀನಿ ಅಂದ್ಕೋಬೇಡ. ಮೊದಲು ವಾಚ್ ಕೊಡು. ಇಲ್ಲಾಂದ್ರೆ ಪೋಲೀಸ್ ಕಂಪ್ಲೇಂಟ್ ಕೊಡ್ತೀನಿ" ಎಂದೆ ಜೋರಾಗಿ.

ರಾಧ ಈಗ ಅಳತೊಡಗಿದಳು—

"ಅವ್ವಾ, ನನ್ನಾಣೆಯಾಗ್ಲೂ ಯೇಳ್ತೀನಿ. ನಾನು ವಾಚು ಕದೀಲಿಲ್ಲ ಕಣವ್ವ." ರಾಧ ಕಣ್ಣೀರು ಗರೆಯುತ್ತಾ ಹೇಳಿದಳು. ನಾನು ನಿರ್ವಿಕಾರವಾಗಿ ನೋಡುತ್ತಾ ನಿಂತಿದ್ದೆ.

ಕೊನೆಗೆ ಅವಳಮ್ಮ, "ಅವ್ವಾ, ಅವಳು ವಾಚು ಕದ್ದಿಲ್ಲಾಂತಾಳೆ. ಬಸ್ರಪ್ಪ. ನಿಮ್ಮನೆಯಾಗೇ ಇನ್ನೊಂದು ಕಿತ ಉಡುಕಿ ನೋಡೋಣ" ಎಂದಳು.

"ಸರಿ. ವಾಚು ಸಿಗದಿದ್ರೆ ಅವಳು ತೊಗೊಂಡಿದ್ದಾಳೇಂತ ಅರ್ಥ. ವಾಪಸು ಕೊಡದಿದ್ರೆ ಪೋಲೀಸಿಗೆ ಹೇಳ್ತೀನಿ" ಎಂದೆ ಕಠಿಣವಾಗಿ.

"ಸರಿ ಕನವ್ವ" ಎಂದಳು ರಾಧಳ ತಾಯಿ ಪೆಚ್ಚಾಗಿ. ನಾವು ಮೂವರೂ ಮನೆಗೆ ಬಂದೆವು. ಅವರೆದುರಿಗೇ ಎಲ್ಲೆಡೆ ಹುಡುಕಿದೆ. ಉಹುಂ, ಸಿಗಲಿಲ್ಲ.

"ಈಗ್ಲಾದ್ರೂ ನಂಬ್ತೀಯಾ ? ಒಳ್ಳೇ ಮಾತಲ್ಲಿ ವಾಚು ವಾಪಸು ಬರ್ಬೇಕು. ಇಲ್ಲಾಂದ್ರೆ ಪೋಲೀಸಿಗೆ ದೂರು ಕೊಡ್ತೀನಿ" ಎಂದೆ.

ಪೋಲಿಸು ಎಂದ ತಕ್ಷಣ ಅವಳಮ್ಮನೂ ಜೋರಾಗಿ ಅಳತೊಡಗಿದಳು. "ಅಮ್ಮ, ನಿಮ್ಮ ದಮ್ಮಯ್ಯ, ಪೋಲಿಸಿಗೆ ಕೊಡ್ಬೇಡಿ, ಮನೇಗೆ ಓಗಿ ಇವಳ ಚಮ್ಡ ಸುಲಿದು ವಾಚು ಕಕ್ಕಿಸ್ತೀನಿ" ಎನ್ನುತ್ತಾ ರಾಧಳ ಜುಟ್ಟೆಳೆದು. ನನ್ನೆದುರೇ ಕೆನ್ನೆಗೆ ಬಾರಿಸಿದಳು. ಅಳುವಿನ ಹೊರತು ರಾಧಳಿಂದ ಬೇರೆ ಉತ್ತರವಿಲ್ಲ.

ಏಕೋ ಅವರ ದೈನ್ಯತೆ ಕಂಡು ಮನ ಕರಗಿತು. "ಹೋಗ್ಲಿ, ಅಳಬೇಡ, ಸುಮ್ನಿರು ರಾಧ. ನೀನು ಅಷ್ಟು ಹೇಳಿದ ಮೇಲೆ ನಂಗೂ ನೀನು ಕದ್ದಿಲ್ಲ ಅನ್ನಿಸ್ತಿದೆ. ಹೇಗೂ ಬಂದಿದೀಯಲ್ಲಾ, ಬಟ್ಟೆ ಒಗೆದೇ ಹೋಗು" ಎಂದೆ. ಬೆಳಿಗ್ಗೆ ಪಾತ್ರೆ ತೊಳೆದು, ಕಸಗುಡಿಸಿ ಹೋಗಿ, ಮಧ್ಯಾಹ್ನ ಬಂದು ಬಟ್ಟೆ ಒಗೆಯುವ ಪರಿಪಾಠ ಅವಳದು.

ಅವಳು ಅರೆಮನಸ್ಸಿನಿಂದಲೇ ಒಪ್ಪಿದಳು. ನಾನು ಬಟ್ಟೆ ನೆನೆಸಲು ಬಚ್ಚಲು ಮನೆಗೆ ಹೋಗಿ, ಒಂದೊಂದೇ ಬಟ್ಟೆಯನ್ನು ಸೋಪು ನೀರಿನಲ್ಲಿ ಅದ್ದತೊಡಗಿದೆ. ಟರ್ಕಿ ಟವಲಿಗೆ ಅಂಟಿ ಕುಳಿತು ಟಿಕ್ ಟಿಕ್ ರಾಗ ಹಾಡುತ್ತಿದ್ದ ವಾಚು, "ಈಗೇನು ಹೇಳ್ತೀಯಾ" ಎಂದು ಅಣಕಿಸಿತು !

ನಾನು ಅವಾಕ್ಕಾಗಿ ಗರಬಡಿದವಳಂತೆ ನಿಂತೆ. ಒಂದು ಗಂಟೆಯಿಂದ ಆವೇಶಪೂರಿತಳಾಗಿ ಅವಳನ್ನು ದೂರುತ್ತಿದ್ದ ನನ್ನ ಧ್ವನಿ ಉಡುಗಿ, ಗಂಟಲಿನ ದ್ರವವೆಲ್ಲಾ ಆರಿಹೋದಂತಾಯಿತು.

ನನ್ನ ಹಿಂದೆಯೇ ಬಂದು ನಿಂತಿದ್ದ ತಾಯಿ. "ವಾಚು ಸಿಕ್ತಲ್ಲವ್ವಾ ? ಎಲ್ಲಿತ್ತು ? ನೋಡಿದ್ರಾ. ನನ್ಮಗಳು ಕಳ್ಳಿ ಅಲ್ಲ ಅಂತ ನಾನು ಯೋಳ್ಲಿಲ್ವಾ ?" ಎಂದು ತಾಯಿ ಹೇಳಿದಳು.

ಅವರನ್ನು ತಲೆಯೆತ್ತಿ ನೋಡುವ ಧೈರ್ಯ ನನ್ನಲ್ಲಿ ಉಳಿದಿರಲಿಲ್ಲ. "ಬಟ್ಟೆ ಜೊತೇಲಿ ಸೇರಿ ವಾಚು ಬಚ್ಚಲು ಮನೆ ಸೇರಿತ್ತು ಕಣಮ್ಮ. ನಂದು ತಪ್ಪಾಯ್ತು." ಎಂದೆ ಕುಗ್ಗಿದ ದನಿಯಲ್ಲಿ.

"ಸದ್ಯ ನಮ್ಮ ಮರ್ಯಾದಿ ಉಳೀತು" ಎಂದು ಹೇಳುತ್ತಿದ್ದ ಅವರ ಮಾತಿಗೆ ಮೌನವೇ ಉತ್ತರವಾಯಿತು.

ಇವರು ವಾಚಿನ ಪಟ್ಟಿ ಬೇಸರವಾಯಿತೆಂದು ಪೆಲ್ಕ್ರೋ ಸ್ಟ್ರಾಪ್ ಹಾಕಿಸಿಕೊಂಡಿದ್ದರು. ನಾನು ಬೆಳಿಗ್ಗೆ ಒಗೆಯುವ ಬಟ್ಟೆಗಳನ್ನು ತರುವ ಮೊದಲು ಟೇಬಲ್ ಮೇಲೆ ಪೇರಿಸಿದ್ದೆ. ಸ್ಟ್ರಾಪ್ ಟವೆಲಿಗೆ ಅಂಟಿ ಬಟ್ಟೆಯ ಜೊತೆ ಬಚ್ಚಲು ಮನೆ ಸೇರಿ ಇಷ್ಟೆಲ್ಲಾ ಅವಾಂತರಕ್ಕೆ ಕಾರಣವಾಯಿತು.

— ಗಾಯತ್ರಿ ಮೂರ್ತಿ

Edited & Published by B. Viswanatha Reddi for DOLTON PUBLICATIONS, MADRAS-600 026
& Printed by B. V. REDDI at Prasad Process Private Ltd., Madras-600 026

